


ಕನ್ನಡವಿಶ್ವವಿದ್ಯಾಲಯ, ಹಂಪಿ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ
ಸಂಶೋಧನಾ ಸಂಪ್ರಬಂಧ

# ಸ್ತ್ರೀವಾದೀ ನೆಲೆಯಲ್ಲಿ ಫೆಡರಿಕೊ ಗಾರ್ಸಿಯಾ ಲೋರ್ಕಾರ ಎರ್ಮಾ ಮತ್ತು ಚಂದ್ರಶೇಖರ ಕಂಬಾರರ ಜೋಕುಮಾರ ಸ್ವಾಮಿ ನಾಟಕಗಳ ಒಂದು ತೌಲನಿಕ ಅಧ್ಯಯನ



ಸಂಶೋಧನಾ ವಿದ್ಯಾರ್ಥಿನಿ
ಶೀಲಾರತ್ನ. ಎಸ್
ನೋಂದಣಿ ಸಂಖ್ಯೆ : KVMBKS-00337

ಮಾರ್ಗದರ್ಶಕರು
ಡಾ. ಡಿ.ಮಂಗಳಾ ಪ್ರಿಯದರ್ಶಿನಿ ಎಂ.ಎ., ಎಂ.ಫಿಲ್., ಪಿಎಚ್.ಡಿ.
ಪ್ರಾಂಶುಪಾಲರು
ವಿ.ವಿ.ಎಸ್. ಪ್ರಥಮ ದರ್ಜೆ ಮಹಿಳಾ ಕಾಲೇಜು, ಬಸವೇಶ್ವರ ನಗರ,
ಬೆಂಗಳೂರು - 560079.




ಕಾವ್ಯಮಂಡಲ
ನಂ. 13/85, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು-560004

2009

# ದೃಢೀಕರಣ ಪತ್ರ

ಶೀಲಾರತ್ನ. ಎಸ್. ರವರು ಎಂ.ಫಿಲ್. ಪದವಿಗಾಗಿ ಬರೆದು ಸಿದ್ಧಪಡಿಸಿರುವ **ಸ್ತ್ರೀವಾದೀ ನೆಲೆಯಲ್ಲಿ ಫೆಡರಿಕೊ ಗಾರ್ಸಿಯಾ ಲೋರ್ಕಾರ ಎರ್ಮಾ ಮತ್ತು ಚಂದ್ರಶೇಖರ ಕಂಬಾರರ ಜೋಕುಮಾರ ಸ್ವಾಮಿ ನಾಟಕಗಳ ಒಂದು ತೌಲನಿಕ ಅಧ್ಯಯನ** ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ, ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಡಿ. ಮಂಗಳ

ಮಾರ್ಗದರ್ಶಕರು

**ಡಾ. ಡಿ.ಮಂಗಳಾ ಪ್ರಿಯದರ್ಶಿನಿ**
ಎಂ.ಎ., ಎಂ.ಫಿಲ್., ಪಿಎಚ್.ಡಿ.
ಪ್ರಾಂಶುಪಾಲರು
ವಿ.ವಿ.ಎಸ್. ಪ್ರಥಮ ದರ್ಜೆ ಮಹಿಳಾ ಕಾಲೇಜು,
ಬಸವೇಶ್ವರ ನಗರ,
ಬೆಂಗಳೂರು - 560079.

ಸ್ಥಳ : ಬೆಂಗಳೂರು
ದಿನಾಂಕ : 25.9.2009

ಪ್ರಾಂಶುಪಾಲರು
ವಿದ್ಯಾ ವರ್ಧಕ ಸಂಘ
ಮಹಿಳಾ ಪ್ರಥಮ ದರ್ಜೆ ಕಾಲೇಜು
ಬಸವೇಶ್ವರನಗರ, ಬೆಂಗಳೂರು-560 079.

# ಪ್ರಮಾಣ ಪತ್ರ

**ಸ್ತ್ರೀವಾದೀ ನೆಲೆಯಲ್ಲಿ ಫೆಡರಿಕೊ ಗಾರ್ಸಿಯಾ ಲೋರ್ಕಾರ ಎರ್ಮಾ ಮತ್ತು ಚಂದ್ರಶೇಖರ ಕಂಬಾರರ ಜೋಕುಮಾರ ಸ್ವಾಮಿ ನಾಟಕಗಳ ಒಂದು ತೌಲನಿಕ ಅಧ್ಯಯನ** ಎಂಬ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು **ಡಾ. ಮಂಗಳಾ ಪ್ರಿಯದರ್ಶಿನಿ** ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವಾಗಿ ಇದುವರೆವಿಗೂ ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ಶೀಲಾರತ್ನ.ಎಸ್

ಸ್ಥಳ : ಬೆಂಗಳೂರು
ದಿನಾಂಕ : 25.9.2009

**ಶೀಲಾರತ್ನ.ಎಸ್**
ಸಂಶೋಧನಾ ವಿದ್ಯಾರ್ಥಿ

# ಪರಿವಿಡಿ

| | | ಪು. ಸಂಖ್ಯೆ |
|---|---|---|
| | ಪೀಠಿಕೆ | 1-4 |
| ಅಧ್ಯಾಯ -೧ : | ಅಧ್ಯಯನದ ವ್ಯಾಪ್ತಿ, ಉದ್ದೇಶ | 5-13 |
| ಅಧ್ಯಾಯ -೨ : | ಪ್ರಧಾನ ಸಂಸ್ಕೃತಿಯ ಹೆಣ್ಣಿನ ನಿರ್ವಚನ | 14-24 |
| ಅಧ್ಯಾಯ -೩ : | ಸ್ತ್ರೀ ಪ್ರತಿಭಟನೆಯ ಸ್ವರೂಪ | 25-41 |
| ಅಧ್ಯಾಯ - ೪ : | ತಾಯ್ತನದ ಪ್ರತಿನಿಧೀಕರಣ - ಎರಡು ನಾಟಕಗಳ ಹಿನ್ನೆಲೆಯಲ್ಲಿ | 42-62 |
| | ೧. ಎರ್ಮಾ ಹಾಗೂ ಜೋಕುಮಾರ ಸ್ವಾಮಿ ನಾಟಕಗಳಲ್ಲಿ ವ್ಯಕ್ತವಾಗುವ ಕನಸು ಹಾಗೂ ಸ್ವಗತದ ಪರಿಕಲ್ಪನೆ | |
| | ೨. ಎರ್ಮಾ ಮತ್ತು ಜೋಕುಮಾರ ಸ್ವಾಮಿ ನಾಟಕಗಳಲ್ಲಿನ ಸಂಕೇತ ಪ್ರಪಂಚ | |
| ಅಧ್ಯಾಯ - ೫ : | ಎರ್ಮಾ ಹಾಗೂ ಜೋಕುಮಾರಸ್ವಾಮಿ ನಾಟಕಗಳಲ್ಲಿನ ಜನಾಂಗೀಯ ಭಿನ್ನತೆಗಳು | 63-70 |
| ಅಧ್ಯಾಯ - ೬ : | ವರ್ಗ ಸಂಘರ್ಷ- ಸ್ತ್ರೀವಾದಿ ಹಿನ್ನೆಲೆಯಲ್ಲಿ | 71-81 |
| | ಸಮಾರೋಪ | 82-85 |
| | ಪರಾಮರ್ಶನ ಗ್ರಂಥಗಳು | 86-87 |

## ಪೀಠಿಕೆ

ಕನ್ನಡ ಸಾಹಿತ್ಯಕ್ಕೆ ಸಾವಿರಾರು ವರ್ಷಗಳ ಅಖಂಡ ಪರಂಪರೆಯಿದ್ದರೂ ನಾಟಕ ಪ್ರಕಾರ ಎನ್ನುವುದು ತೀರಾ ತಡವಾಗಿ ಬಂದಿದೆ.ಇದುವರೆಗೆ ದೊರೆತಿರುವ ಕನ್ನಡ ನಾಟಕಗಳಲ್ಲಿ ತುಂಬ ಹಳೆಯದೆಂದರೆ ಮೈಸೂರಿನ ದೊರೆ ಚಿಕ್ಕದೇವರಾಜರ ಆಸ್ಥಾನದಲ್ಲಿದ್ದ ಸಿಂಗರಾರ್ಯ ಎಂಬ ಕವಿ ರಚಿಸಿದ ಮಿತ್ರವಿಂದಾ ಗೋವಿಂದ ಎಂಬುದು ಸುಮಾರು ಕ್ರಿ.ಶ. ೧೬೮೦ರಲ್ಲಿ ರಚಿತವಾದ ಈ ಕೃತಿ ಶ್ರೀ ಹರ್ಷನ 'ರತ್ನಾವಳಿ' ಎಂಬ ಸಂಸ್ಕೃತ ನಾಟಕದ ಕನ್ನಡ ರೂಪ. ಈ ನಾಟಕವು ಚರಿತ್ರೆಯಲ್ಲಿಯೇ ಮುಖ್ಯವಾದ ಒಂದು ಮೈಲುಗಲ್ಲಾಗಿ ನಿಂತಿದೆ.

ಕನ್ನಡದಲ್ಲಿ ನಾಟಕದ ಉಗಮದ ಬಗ್ಗೆ ಖಚಿತವಾದ ಹೇಳಿಕೆಯನ್ನು ಕೊಡುವುದು ಕಷ್ಟವಾಗಿದೆ. 'ಮಿತ್ರವಿಂದಾ ಗೋವಿಂದ' ಕ್ಕಿಂತ ಮುಂಚೆ ನಾಟಕಗಳು ಇದ್ದವು ಎಂಬುದಕ್ಕೆ ರತ್ನಾಕರವರ್ಣಿಯ'ಭರತೇಶ ವೈಭವ', ದುರ್ಗಸಿಂಹನ 'ಪಂಚತಂತ್ರ', ನಿಜಗುಣ ಶಿವಯೋಗಿಗಳ' ವಿವೇಕ ಚಿಂತಾಮಣಿ' ಹಾಗೂ ಶ್ರೀವಿಜಯನ 'ಕವಿರಾಜಮಾರ್ಗ' ಹಾಗೂ ಭರತನ 'ನಾಟ್ಯಶಾಸ್ತ್ರ' ದಂತಹ ಲಕ್ಷಣ ಗ್ರಂಥಗಳಲ್ಲಿ ಕೆಲವು ಸುಳಿವುಗಳಿರುವುದನ್ನು ನಾವು ನೋಡಬಹುದು.

ಕನ್ನಡ ರಂಗಭೂಮಿಯು ಪ್ರಜ್ಞಾಪೂರ್ವಕವಾಗಿ ಅಥವಾ ಅಪ್ರಜ್ಞಾಪೂರ್ವಕವಾಗಿ ವಿವಿಧ ದೇಶದ ನಾಟಕ ಮಾದರಿಗಳನ್ನು ಬಳಸಿಕೊಳ್ಳುತ್ತ ಬಂದಿದೆ. ಯಾವುದೇ ದೇಶದ ರಂಗಭೂಮಿ ಅಲ್ಲಿನ ಧಾರ್ಮಿಕ ಪರಂಪರೆಯ ಅಂಗವಾಗಿ ಹುಟ್ಟಿ ಸಾಮಾಜಿಕವಾಗಿ ಬೆಳೆದು ಬಂದಿದೆ ಎಂಬುದನ್ನು ನಾವು ನೋಡಬಹುದು.

ಪಾಶ್ಚಾತ್ಯ ಜಗತ್ತಿನ ನಾಟಕಗಳಿಗೆಲ್ಲಾ ಅತ್ಯಂತ ಸ್ಫೂರ್ತಿಯುತವೂ, ಪ್ರಾಚೀನವೂ ಮತ್ತು ವಿಶೇಷ ಪರಿಣಾಮಕಾರಿಯೂ ಆಗಿದ್ದ ನಾಟಕಗಳೆಂದರೆ ಗ್ರೀಕ್ ರುದ್ರನಾಟಕಗಳು. ಇತಿಹಾಸದಲ್ಲಿ ರಂಗಭೂಮಿಯು ಒಂದು ಶಾಸ್ತ್ರವಾಗಿದ್ದು ಈ ಪ್ರಾಚೀನ ಗ್ರೀಕ್‌ನಲ್ಲಿಯೇ ಎಂದು ಹೇಳಬಹುದು. ಇಲ್ಲಿನ ಚಿಂತಕ ಅರಿಸ್ಟಾಟಲ್ ಪ್ರತಿಪಾದಿಸಿದ ನಾಟಕ ರಚನಾಕ್ರಮ, ಟ್ರಾಜಿಡಿ- ಕಾಮಿಡಿಗಳೆಂಬ ವಿಭಜನೆ ಈ ಶತಮಾನದವರೆಗೂ ಪಾಶ್ಚಾತ್ಯರಿಗೆ ಆದರ್ಶವಾಗಿ ಉಳಿದಿದೆ.

ಆಧುನಿಕ ರಂಗಭೂಮಿಯು ಹಿಂದಿನ ರಂಗಭೂಮಿಗಳಿಗಿಂತ ಭಿನ್ನವಾಗಿದೆ. ಈ ಆಧುನಿಕ ಜಾನಪದ ರಂಗಭೂಮಿಯ ಕಲ್ಪನೆ ಜರ್ಮನ್ ನಾಟಕಕಾರ ಬರ್ಟೋಲ್ಟ್ ಬ್ರೆಕ್ಟ್‌ನ 'ಮುಕ್ತ ರಂಗಭೂಮಿ'ಯ ಕಲ್ಪನೆಯಾಗಿದೆ. ಬ್ರೆಕ್ಟ್ ತನ್ನ ಎಪಿಕ್ ಥಿಯೇಟರ್‌ನ ಪರಿಕಲ್ಪನೆಯಲ್ಲಿ ಜನಪದ ರಂಗಭೂಮಿಯನ್ನು ಬಳಸಿಕೊಂಡು ಆಧುನಿಕ ರಂಗಭೂಮಿಯ ಪರಿಕಲ್ಪನೆಗಳನ್ನು ಸೃಷ್ಟಿಸಿದ. ಇವನು ತನ್ನ ನಾಟಕಗಳಲ್ಲಿ ಮಾನವನ ವೈಪರೀತ್ಯಗಳನ್ನು ಬಯಲುಗೊಳಿಸಿದ್ದಾನೆ. ಇವು ಪ್ರೇಕ್ಷಕರಿಗೆ ತಿಳುವಳಿಕೆಯನ್ನು ನೀಡುತ್ತವೆ. ಪ್ರೇಕ್ಷಕರನ್ನು ನಾಟಕದ ಮೂಲಕ ಚಿಂತಕರನ್ನಾಗಿ ಮಾಡುವುದು. ಕಲಾತ್ಮಕ ರಂಗಭೂಮಿಗಿಂತ ಭಿನ್ನವಾಗಿ ಜನರೇ ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ಕ್ರಿಯಾತ್ಮಕ ರಂಗಭೂಮಿಯನ್ನು ತಂದುಸಮಕಾಲೀನ ಸಮಸ್ಯೆಗಳನ್ನು ನಿಜವಾಗಿ ವಿಶ್ಲೇಷಣೆ ಮಾಡಿ ತೋರಿಸುವುದು, ಪ್ರೇಕ್ಷಕರಿಗೆ ಅಪರಿಮಿತವಾದ ಸ್ವಾತಂತ್ರ್ಯ ನೀಡಿ, ಮನರಂಜನೆಯ ಮೂಲಕ ವಿಕಾಸಗೊಳಿಸುವುದೇ ಎಪಿಕ್ ಜಾನಪದ ರಂಗಭೂಮಿಯ ಕಲ್ಪನೆಯಾಗಿದೆ.

ಜಾನಪದ ರಂಗಭೂಮಿ ಎಂದರೆ ಜನಸಾಮಾನ್ಯರ ಮನೋರಂಜನೆ, ಮನೋವಿಕಾಸಕ್ಕಾಗಿ ಮೈತಳೆದ ಗ್ರಾಮೀಣ ರಂಗಭೂಮಿ' ಎಂದು ವಿವರಿಸಲಾಗಿದೆ. ಪಂಡಿತರ ಹಾಗೂ ಶ್ರೀಮಂತರ ಮನೋರಂಜನೆಯ ಸಲುವಾಗಿ ಮೈವೆತ್ತ ರಾಜರ ಆಸ್ಥಾನಗಳಲ್ಲಿನ ರಂಗಭೂಮಿಗಿಂತ ಇದು ಬೇರೆಯಾದುದು. ಜನತೆಯ ರಂಗಭೂಮಿ ಇದು ಅಥವಾ 'ಹಳ್ಳಿಯ ನಾಟಕ ರಂಗ' ಎನ್ನಬಹುದು. ಯಾವುದೇ ದೇಶದ ರಂಗಭೂಮಿಯ ಪ್ರಕಾರಗಳಲ್ಲಿ ಜನತಾ ರಂಗಭೂಮಿಯೇ ಅತ್ಯಂತ ಪ್ರಾಚೀನವಾದುದೆಂದು ನಾಟಕ ಪಂಡಿತರ ನಿಶ್ಚಿತ ಅಭಿಪ್ರಾಯವಾಗಿದೆ. ಇದು ಮುಂದಿನ ಪ್ರಕಾರಗಳಾದ ವೃತ್ತಿ ರಂಗಭೂಮಿ ಹಾಗೂ ವಿಲಾಸೀ ರಂಗಭೂಮಿಗಳ ರೂಪರೇಷೆಗಳನ್ನು ರೂಪಿಸುವ ಪ್ರೇರಕ ಶಕ್ತಿಯಾಗಿದೆ.

ಯಾವುದೇ ದೇಶದ ಜನತಾ ರಂಗಭೂಮಿಯನ್ನು ಕುರಿತು ವಿಮರ್ಶಿಸಿದಾಗ, ನೃತ್ಯ ಗೀತೆಗಳು ಮುಖ್ಯಾಂಗಗಳಾಗಿ ನಿಲ್ಲುತ್ತವೆ. ಬದುಕಿನ ಆನಂದವನ್ನು ಅಭಿವ್ಯಕ್ತಗೊಳಿಸುವ 'ನೃತ್ಯ'ಇದರ ಜೀವಶಕ್ತಿ. ಜಾನಪದ ನೃತ್ಯಗಳ ಸತ್ವವೂ, ವೈವಿಧ್ಯವೂ, ವೈಭವವೂ ಇದಕ್ಕೆ ಅಡಿಪಾಯ ಹಾಕಿದೆ. ಇಂಥಾ ಎಲ್ಲಾ ನೃತ್ಯಗಳೂ ಮೂಲತಃ ದೇವಪೂಜೆಯ ಅಂಶಗಳಾದುದರಿಂದ ಜನತಾ ರಂಗಭೂಮಿಯ ಹುಟ್ಟು ದೇವಪೂಜೆಯ ಮೂಲ

ಮನೋಭಾವದಲ್ಲಿಯೇ ಅಡಗಿದೆ . ಒಂದೊಂದು ಕಾಲಘಟ್ಟಗಳಲ್ಲಿ ಜಾನಪದ ರಂಗಭೂಮಿ ವಿಕಾಸಗೊಳ್ಳುತ್ತ ಬಂದಿದೆ. ಜೊತೆಗೆ ವಸ್ತು, ತಂತ್ರ, ರಂಗ, ಪಾತ್ರಗಳ ವೇಷಭೂಷಣಗಳು ಬದಲಾಗುತ್ತ ಬಂದಿರುವುದು ಕಂಡು ಬರುತ್ತದೆ.

**ನಾಟಕಕಾರರ ಪರಿಚಯ**

**ಫೆಡೆರಿಕೊ ಗಾರ್ಸಿಯಾಲೋರ್ಕಾ :**

ಫೆಡೆರಿಕೊ ಗಾರ್ಸಿಯಾ ಲೋರ್ಕಾ ಸ್ಪೈನ್ ದೇಶದ ಕವಿ ಹಾಗೂ ಪ್ರಸಿದ್ಧ ನಾಟಕಕಾರ. ಈತ ಸ್ಪೈನಿನ ಅಂಡಲೂಸಿ ಎಂಬ ಸ್ಥಳದಲ್ಲಿ ಹುಟ್ಟಿದ. ಇವನೊಬ್ಬ ಜನಪದ ಪ್ರಜ್ಞೆಯ ನಾಟಕಕಾರ. ''ಮಾತಾಡುವವರ ನಡುವೆ ಹಾಡುವ ಕಬ್ಬಿಗ'' ಎಂದು ಹೆಸರಾಗಿದ್ದಾನೆ. ಇವನಿಗೆ ಬರೆಯುವ ಕಾವ್ಯಕ್ಕಿಂತ ಹಾಡಿ ತಲುಪಿಸುವ ಹಂಬಲವಿತ್ತು. ಹೋರಾಟದ ಅನುಭವವನ್ನು ಪಡೆದು ಬರೆದ ಕವಿ. ಆದರೆಹೋರಾಟವೇಅವನ ನಾಟಕದ ಮುಖವಾಡವಾಗಿರಲಿಲ್ಲ. ಲಾರೆನ್ಸ್, ಮಾರ್ಕ್ವೆಜ್ ರೀತಿ ಮನುಷ್ಯನ ನಿಗೂಢ ಸ್ತರಗಳನ್ನು ಅರಿಯಲು ಪ್ರಯತ್ನಿಸಿದವನು. ತನ್ನ ಕಾಲದ ವಾಸ್ತವವಾದಿ ರಂಗಭೂಮಿಯನ್ನು 'ಬೂರ್ಶ್ವಾ ರಂಗಭೂಮಿ' ಎಂದು ತಿರಸ್ಕರಿಸಿದ. ವಾಸ್ತವವಾದಕ್ಕೆ ಪ್ರತಿಯಾಗಿ ಸರ್ರಿಯಲಿಸ್ಟ್ ರಂಗಭೂಮಿಯನ್ನು ನಿರ್ಮಿಸಲು ಯತ್ನಿಸಿದ.

ಲೋರ್ಕಾ ತನ್ನ ನಾಟಕಗಳ ಮೂಲಬೇರು ಗ್ರೀಕ್ ದುರಂತ ನಾಟಕಗಳಲ್ಲಿ ಅಡಗಿದೆ ಎನ್ನುತ್ತಾನೆ. ಇವನು ಹುಟ್ಟಿದೂರನ್ನು 'ಸ್ವರ್ಗದ ತೋಟ' ಎಂದು ಮನದುಂಬಿ ವರ್ಣಿಸಿದ. ಇವನು ಟಿ.ಎಸ್. ಎಲಿಯಿಟ್ ಕವಿಯ 'ವೇಸ್ಟ್‌ಲ್ಯಾಂಡ್' ಕವಿತೆಗೆ ಸಂವಾದಿಯಾಗಿ 'ದಿ ಕಿಂಗ್ ಹಾರ್ಲೈಮ್' ಎಂಬ ಕವಿತೆಯನ್ನು ರಚಿಸಿದ್ದಾನೆ.

'ಪ್ರೀತಿ ಮತ್ತು ನಿರಾಶೆ' ಇವೆರಡೂ ಜೊತೆ ಜೊತೆಯಾಗಿಯೇ ನಡೆಯುತ್ತವೆ ಎಂಬ ವಿಚಿತ್ರ ಅಸ್ತಿತ್ವವಾದಿ ಸತ್ಯವನ್ನು ಕಂಡುಕೊಂಡ ಲೋರ್ಕಾ ಈ ಸತ್ಯದ ಸುತ್ತ ಬಹುತೇಕ ನಾಟಕಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ 'ಬ್ಲಡ್ ವೆಡ್ಡಿಂಗ್' 'ಎರ್ಮಾ', 'ದಿ ಹೌಸ್ ಆಫ್ ಬರ್ನಾಡ್ ಆಲ್ಬ' ಹಾಗೂ 'ಶೂ ಮೇಕರ್ಸ್ ವಂಡರ್‌ಫುಲ್ ಲೈಫ್' ಇತ್ಯಾದಿ.

ಲೋರ್ಕಾ ಹೆಣ್ಣಿನ ಸಮಸ್ಯೆಗಳಾದ ಬಂಜೆತನ, ವಿವಾಹ ಬಾಹಿರ ಪ್ರೇಮ, ಕೆಳವರ್ಗದವರ ಜೀವನದ ಬವಣೆಗಳು ಇವೆಲ್ಲವನ್ನೂ ದ್ರವ್ಯವಾಗಿಸಿಕೊಂಡು ತನ್ನ ನಾಟಕಗಳಲ್ಲಿ ತಂದಿದ್ದಾನೆ. ಇವನು ರಚಿಸಿದ ಹಾಡುಗಳು ಭಾಷೆಯ ಬೆಡಗನ್ನೂ ನಾಟಕದ ಜೀವಂತಿಕೆಯನ್ನು ಹೆಚ್ಚಿಸಿವೆ. ಅವನು ಆಯ್ದ ವೈವಿಧ್ಯಮಯ ವಸ್ತುಗಳು ಜನತೆಯನ್ನು ಬೆಚ್ಚಿಬೀಳಿಸುತ್ತ ಬದುಕಿನ ತಲ್ಲಣಗಳನ್ನು ಇನ್ನೂ ಹೆಚ್ಚಿಸುತ್ತವೆ. ಜಗತ್ತಿನಲ್ಲಿ ಲೋರ್ಕಾ ವಿಶಿಷ್ಟ ವಿಲಕ್ಷಣ ಕವಿ ಹಾಗೂ ಮಹಾನ್ ನಾಟಕಕಾರ ಎಂಬುದು ಇವನ ಕೃತಿಗಳ ಮೂಲಕ ಸ್ಪಷ್ಟವಾಗುತ್ತದೆ.

### ಚಂದ್ರಶೇಖರ ಕಂಬಾರ

ಚಂದ್ರಶೇಖರ ಕಂಬಾರರು ಬೆಳಗಾಂ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಗೋಡಗೇರಿ ಎಂಬ ಉತ್ತರ ಕರ್ನಾಟಕದ ಹಳ್ಳಿಯೊಂದರಲ್ಲಿ ೧೯೩೭ರಲ್ಲಿ ಜನಿಸಿದರು. ನವ್ಯದ ಮತ್ತು ಎಡಪಂಥೀಯ ವಿಚಾರಧಾರೆಯ ಕೆಲವು ಗುಣಾಂಶಗಳನ್ನು ಒಪ್ಪಿಕೊಳ್ಳುವ ಕಂಬಾರರು ಹಳ್ಳಿಯ ಮುಗ್ಧತೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಜನಪದ ಕಾವ್ಯದ ಲಯಗಾರಿಕೆಯನ್ನು ಭಾವ ಸಂಪತ್ತನ್ನು ಬೇಂದ್ರೆ ಹಾಗೂ ಬೆಟಗೇರಿ ಕೃಷ್ಣಶರ್ಮರಿಂದ ಸೂರೆಗೊಂಡಿದ್ದರು. ನವ್ಯದ ಭರಾಟೆ ಪ್ರಾರಂಭವಾಗಿದ್ದ ಅಂದಿನ ಕಾಲಕ್ಕೆ ನವೋದಯಕ್ಕಿಂತಲೂ ಹಳತಾದ ಜನಪದ ಕಾವ್ಯವನ್ನು ಪ್ರಸ್ತುತಗೊಳಿಸುವುದು ಒಂದು ಸವಾಲಾಗಿತ್ತು. ಕಂಬಾರರು ಅತ್ಯಂತ ಜಾಗರೂಕತೆಯಿಂದ ಈ ಸವಾಲನ್ನು ಸ್ವೀಕರಿಸಿದರು.

ಇವರು ಅನೇಕ ಕಾವ್ಯಗಳನ್ನು, ನಾಟಕಗಳನ್ನು, ಕಾದಂಬರಿಗಳನ್ನು, ಜಾನಪದ ಕೃತಿಗಳನ್ನು, ಕಥೆಗಳನ್ನು ಹಾಗೂ ಕವನಗಳನ್ನು ರಚಿಸಿದ್ದಾರೆ. ಇವರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಲಭಿಸಿವೆ.

ಇವರ ನಾಟಕಗಳಲ್ಲಿ ಭಾಷೆ ಹಾಗೂ ಬಂಧಗಳು ವಿಶಿಷ್ಟವಾಗಿರುತ್ತದೆ. ನಮ್ಮ ಸಾಹಿತ್ಯ ಒಗ್ಗಿಸಿಕೊಂಡ ನಯ ನಾಜೂಕಿನ ಮಧ್ಯಮ ವರ್ಗದ ಸಂಸ್ಕೃತಿಯ ಸೆಳೆತ ಅವರ ನಾಟಕಗಳ ವಸ್ತುವಿನಲ್ಲಿದ್ದರೆ ಲಯ ಮತ್ತಿತರ ಮಜಲುಗಳಲ್ಲಿ ಕಾಣುವ ಮಣ್ಣಿನ ಮಿಡಿತಗಳ ದ್ವಂದ್ವ ಅವರ ಭಾಷಾ ಪ್ರಯೋಗದಲ್ಲಿ ಇರುತ್ತದೆ. ಇವರ ನಾಟಕಗಳಲ್ಲಿ ಜನಪದ ಪ್ರಜ್ಞೆ ಮತ್ತು ಆಧುನಿಕ ಪ್ರಜ್ಞೆಗಳ ದ್ವಂದ್ವ ಅನಿವಾರ್ಯವಾಗಿರುತ್ತದೆ. ಆದರೂ ಜಾನಪದವನ್ನು ನಗರ ಕೇಂದ್ರಿತವಾಗಿ ನೋಡುತ್ತ ನಗರದ ಪ್ರೇಕ್ಷಕರಿಗೆ ಹೊಸದೊಂದು ಅನುಭವವನ್ನು ತಂದು ಕೊಡುವಲ್ಲಿ ಯಶಸ್ವಿಯಾಗಿದ್ದಾರೆ.

## ಅಧ್ಯಾಯ - ೧

# ಅಧ್ಯಯನದ ವ್ಯಾಪ್ತಿ, ಉದ್ದೇಶ

ಸ್ತ್ರೀ ವಿಮೋಚನೆ ಸಮಕಾಲೀನ ಜಗತ್ತಿನ ಅಗತ್ಯ ಹಾಗೂ ಚಾರಿತ್ರಿಕ ಅನಿವಾರ್ಯತೆಗಳಲ್ಲಿ ಒಂದು. ಅನೇಕ ಶತಮಾನಗಳಿಂದ ವ್ಯವಸ್ಥಿತವಾಗಿ ಎಲ್ಲಾ ಬಗೆಯಿಂದಲೂ ಬಂಧನಕ್ಕೊಳಪಟ್ಟವಳು ಮಹಿಳೆ. ಇದು ಸಾರ್ವತ್ರಿಕವಾದ ಸಂಗತಿ ಮನುಷ್ಯನ ಇತಿಹಾಸದಲ್ಲಿಮೊದಲು ಆಕೆ ದಾಸ್ಯಕ್ಕೆ ಹೇಗೆ ಒಳಗಾದಳೆಂಬುದಕ್ಕೆ ಅನೇಕ ರೀತಿಯ ಉತ್ತರಗಳು ಸಾಧ್ಯ. ಆದರೆ ಒಂದು ಕ್ಷಣದಲ್ಲಿ, ಒಂದು ದಿನದಲ್ಲಿ ಇತಿಹಾಸ ಪಡೆದು ತಿರುವು ಇದಲ್ಲ. ಕ್ರಮೇಣ ಈ ದಾಸ್ಯದ, ಅಸಮಾನತೆಯ ಪರಂಪರೆ ಬೆಳೆಯಿತು. ಮಹಿಳೆ ಸಾಮಾಜಿಕ ಉತ್ಪಾದನಾ ಕ್ಷೇತ್ರದಿಂದ, ಸಾಮಾಜಿಕ, ರಾಜಕೀಯ ಸಾಂಸ್ಕೃತಿಕ ವಲಯುಗಳ ಮುಖ್ಯ ಪ್ರವಾಹದಿಂದ ಹೊರಗೆ ದಬ್ಬಲ್ಪಟ್ಟಳು. ಕುಟುಂಬಕ್ಕೆ ಅವಳನ್ನು ಕಟ್ಟಿ ಹಾಕಲಾಯಿತು. ಮಾತೃತ್ವ, ಪಿತೃತ್ವ, ಸ್ತ್ರೀತ್ವದ ಆದರ್ಶಗಳು ಕ್ರಮೇಣ ಅವಳ ಮೇಲೆ ಹೇರಲ್ಪಟ್ಟವು. ಆ ಆದರ್ಶಗಳು ಅವಳನ್ನು 'ಆಳಲು' ಅನುಕೂಲವಾಗುವಂತೆ ರೂಪಿಸಿದ್ದೇ ವಿನಾ ಅವಳ ಹಿತವನ್ನು ಲಕ್ಷ್ಯದಲ್ಲಿಟ್ಟುಕೊಂಡು ರೂಪಿತವಾದುದಲ್ಲ. ಆ ಜಾಗತಿಕ ಇತಿಹಾಸದಿಂದ ಭಾರತದ ಕರ್ನಾಟಕದ ಸ್ತ್ರೀ ಹೊರತಲ್ಲ.

ನಮ್ಮ ದೇಶದಲ್ಲಿ ಸ್ತ್ರೀ - ಪುರುಷ ಸಮಾನತೆಯ ಪ್ರತಿಯಾಗಿ ಅರ್ಧನಾರೀಶ್ವರನಂಥ ಪೌರಾಣಿಕ ಪ್ರತೀಕಗಳಿವೆ. ಸ್ತ್ರೀ ಪ್ರಾಬಲ್ಯ ಸೂಚಕವಾಗಿ ಮಾತೃಪ್ರಧಾನ ವ್ಯವಸ್ಥೆಯನ್ನು ಕಾಣುತ್ತೇವೆ. ಗಂಡಿನಲ್ಲಿ ಸಾಧ್ಯವಾಗದಂಥ ಹೆಣ್ಣಿನಲ್ಲಿ ಮಾತ್ರವೇ ಇದ್ದ ಸೃಷ್ಟಿ ಸಾಮರ್ಥ್ಯ ಆಕೆಯನ್ನು ದೇವರು ಮತ್ತು ಯಜಮಾನಿಯ ಸ್ಥಾನದಲ್ಲಿ ಇರಿಸಿತ್ತು. ಹೆಣ್ಣಿಗೆ ವಧುದಕ್ಷಿಣೆ ರೂಪದಲ್ಲಿಇದ್ದ ತೆರದ ಕಲ್ಪನೆ ಇಂದಿಗೂ ಕೆಲವು ಆದಿವಾಸಿ ಕುಟುಂಬಗಳಲ್ಲಿ ಆಚರಣೆಯ ಸ್ವರೂಪದಲ್ಲಿ ಉಳಿದು ಬಂದಿರುವುದನ್ನು ನಾವು ಗಮನಿಸಬಹುದು.

ಪೂಜ್ಯನೀಯವಾಗಿದ್ದ ಮತ್ತು ಯಜಮಾನಿಯಾಗಿದ್ದ ಹೆಣ್ಣನ್ನು ಪುರುಷ ತನ್ನ ದೈಹಿಕ ಬಲವನ್ನು ಮುಂದಿರಿಸಿಕೊಂಡು ಮತ್ತು ಮಕ್ಕಳ ಪಾಲನೆಗಾಗಿ ಒಂದೇ ಕಡೆ ನೆಲಸಬೇಕಿದ್ದ ಹೆಣ್ಣಿನ ಸ್ಥಿತಿಯನ್ನು ಉಪಯೋಗಿಸಿಕೊಂಡು ಕ್ರಮೇಣ ಪುರುಷ ತನ್ನ

ಅಧಿಪತ್ಯವನ್ನು ಪ್ರಾರಂಭಿಸಿದ್ದಾನೆ. ಈ ಅಧಿಪತ್ಯ ಎಷ್ಟರಮಟ್ಟಿಗೆ ಪ್ರಭಾವಶಾಲಿಯಾಗಿದೆ ಎಂದರೆ ಹೆಣ್ಣನ್ನು ಸ್ವಾತಂತ್ರ್ಯಕ್ಕೆ, ಶಿಕ್ಷಣಕ್ಕೆ ಯೋಗ್ಯಳಲ್ಲವೆಂದು ನಿರೂಪಿಸಿ ಆಕೆಗೆ ವಿನಯತೆ. ವಿಧೇಯತೆ, ಕೋಮಲತೆ, ಜಡತೆ, ತಾಳ್ಮೆ, ಅಸಮಗ್ರತೆ, ಸಂಗೋಪನಾಶೀಲತೆ, ಭಾವನ ಪ್ರಧಾನತೆಗಳಂಥ ಗುಣಲಕ್ಷಣಗಳನ್ನು ಆರೋಪಿಸಿ ಆಕೆಯನ್ನು ಕೇವಲ ಭೋಗದ ವಸ್ತುವನ್ನಾಗಿ ಸೀಮಿತಗೊಳಿಸಿತು. ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ, ಕೌಟುಂಬಿಕವಾಗಿ, ಆರ್ಥಿಕವಾಗಿ ಆಕೆಯನ್ನು ಕಡೆಗಣಿಸಲಾಯಿತು. ಆದ ಕಾರಣವೇ ಪುರುಷ ನಿರ್ಮಿತ ಇತಿಹಾಸದಲ್ಲಿ ಪುರಾಣಗಳಲ್ಲಿ, ಸಂಕಥನಗಳಲ್ಲಿ, ಭಾಷೆಯಲ್ಲಿ, ಸಾಂಸ್ಕೃತಿಕ ಆಚರಣೆಗಳಲ್ಲಿ, ಶಾಸ್ತ್ರ-ಧರ್ಮಗಳಲ್ಲಿ ಆಕೆಯನ್ನು ಮೂಲೆಗೆ ತಳ್ಳಲಾಯಿತು.

ತಲೆಮಾರುಗಳನ್ನು ಹಾಯ್ದು ಬಂದಂಥ ಪುರುಷ ಪ್ರಧಾನ ವ್ಯವಸ್ಥೆಯನ್ನು ಸ್ತ್ರೀಯರು ಆರೋಪಿಸಿಕೊಂಡು, ಒಪ್ಪಿತ ಮನಸ್ಸಿನಿಂದ ಪರಿಸ್ಥಿತಿಗೆ ಹೊಂದಿಕೊಂಡು ಬಿಟ್ಟಿದ್ದರು. ಎರಡನೇ ದರ್ಜೆಯ ವ್ಯಕ್ತಿಯಾಗಿರುವುದೇ ನಮ್ಮ ಜೀವನ ವಿಧಾನ ಎಂದು ನಂಬಿದ್ದರು. ಆದರೆ ೧೯ನೇ ಶತಮಾನದಲ್ಲಿ ಸ್ತ್ರೀವಾದಿಸಂಘಟನೆಗಳು, ವಿಮರ್ಶೆಗಳು, ಸಂವೇದನೆಗಳು ಬೆಳೆದು ಬಂದು ಸ್ತ್ರೀಯರಿಗೆ ಅವರ ಸ್ಥಾನವನ್ನು ಮನವರಿಕೆ ಮಾಡಿಸುವ ಪ್ರಯತ್ನ ನಡೆಯುತ್ತಿವೆ. ಸ್ತ್ರೀಯರ ರಾಜಕೀಯ, ಆರ್ಥಿಕ ಹಕ್ಕುಗಳಿಗಾಗಿ ಮತ್ತು ಜನಾಂಗೀಯ ಗುಲಾಮಗಿರಿತನವನ್ನು ನಿರ್ನಾಮ ಮಾಡುವ ಧ್ಯೇಯದಿಂದ ಸಾವಿರ ಸಾವಿರ ವರ್ಷಗಳ ಪರಂಪರೆ ಒಮ್ಮುಖವಾಗಿ ನಮ್ಮನ್ನು ತಿದ್ದಿ, ರೂಪಿಸಿ, ಹೊಂದಿಸಿರುವಾಗ ಕೇವಲ ೨೦೦ ವರ್ಷಗಳಷ್ಟು ಈಚಿನಿಂದ ಮಹಿಳೆಯರು ತಮ್ಮ ಬದುಕಿಗೆ ತಮ್ಮದೇ ಆದ ಅರ್ಥವಿರಬಹುದೆಂದು ಹುಡುಕ ಹೊರಟಿದ್ದಾರೆ. ಇಂಥ ಹುಡುಕಾಟದ ಪ್ರತಿಫಲವಾಗಿಯೇ ಸ್ತ್ರೀ ಸಾಹಿತ್ಯ, ಸ್ತ್ರೀವಾದಿ ವಿಮರ್ಶೆ, ಸ್ತ್ರೀ ಸಂವೇದನೆ, ಲಿಂಗಪರಿಕಲ್ಪನಾಧಾರಿತ ಅಧ್ಯಯನಗಳು ರೂಪುಗೊಂಡಿವೆ.ಇವು ಸ್ತ್ರೀಯರ ಸಮಸ್ಯೆಗಳಿಗೆ ಸ್ಪಂದಿಸುವ ಅಂಚಿಗೆ ತಳ್ಳಲ್ಪಟ್ಟಿದ ಸ್ತ್ರೀ ಸಮುದಾಯವನ್ನು ಸಮಾಜದ ಮುಖ್ಯ ವಾಹಿನಿಗೆ ತರುವ ಪ್ರಯತ್ನ ಮಾಡುತ್ತಿವೆ.

ಸಮಾಜದಲ್ಲಿ ಮಹಿಳೆಯರ ಮೇಲೆ ನಡೆಯುವ ಅನ್ಯಾಯ, ಅಸಮಾನತೆ ಮತ್ತು ಆಕೆಗೆ ಕೊಡಲ್ಪಟ್ಟ ಕೆಳದರ್ಜೆಯ ಸ್ಥಾನ-ಮಾನಗಳ ವಿಷಯದಲ್ಲಿ ಮಹಿಳೆಯರೊಳಗೇ

ಹುಟ್ಟಿದ ಬೇಸರ, ಅಸಮಾಧಾನ ಮತ್ತು ನೋವುಗಳೇ 'ಸ್ತ್ರೀವಾದಿ ಚಳುವಳಿ' ಹುಟ್ಟಿಕೊಳ್ಳಲು ಕಾರಣವ್ವಾಯಿತು.

ಗಂಡ, ಮಕ್ಕಳು, ಹಣ ಹಾಗೂ ಇನ್ನಿತರ ಸೌಕರ್ಯಗಳಿದ್ದರೂ ಸಮಾಜದಲ್ಲಿ ಸ್ತ್ರೀಯರ ಹುಟ್ಟು ಇರವು, ಸಾವು ಇತ್ಯಾದಿ ಈ ಯಾವುದಕ್ಕೂ ಪುರುಷನ ಸ್ಥಾನ-ಮಾನಗಳು ಇಲ್ಲವೆಂಬ ಕೊರಗು ಸ್ತ್ರೀಯರನ್ನು ಕಾಡಿತು. ೧೮ನೇ ಶತಮಾನದ ಅಂತ್ಯದಲ್ಲಿ ಯುರೋಪಿನ ಮೇರಿ ವುಲ್‌ಸ್ಟನ್ ಕ್ರಾಫ್ಟ್‌ಳು ಮಹಿಳಾ ಸ್ಥಾನಮಾನದ ಬಗ್ಗೆ ದನಿ ಎತ್ತಿದಳು. 'ಸ್ತ್ರೀವಾದಿ' ವಿಶ್ಲೇಷಣೆಯುಳ್ಳ 'ದಿ ಸೆಕೆಂಡ್ ಸೆಕ್ಸ್' ನ ಕೃತಿಕಾರ್ತಿ ಸಿಮೋನ್ ದ ಬೋವಾ ''ಪೂರ್ಣ ಪ್ರಪಂಚವನ್ನು ಪುರುಷನು ತನ್ನಿಚ್ಛೆಗೆ ತಕ್ಕಂತೆ ಹುಟ್ಟಿಸಿ ಬೆಳೆಸುತ್ತಾನೆ. ತನ್ನ ದೃಷ್ಟಿಕೋನಕ್ಕೆ ಅನುಗುಣವಾಗಿ ನಿಯಂತ್ರಿಸುತ್ತಾನೆ. ಉತ್ಪಾದನಾ ಪ್ರಕ್ರಿಯೆಯಲ್ಲಿಒಂದು ಮಹತ್ತರ ಕ್ರಾಂತಿಯಾದಾಗ ಮಾತ್ರ ಸ್ತ್ರೀಯರ ಸ್ಥಿತಿ-ಗತಿಯಲ್ಲಿ ಸುಧಾರಣೆ ಸಾಧ್ಯ' ಎಂದು ಹೇಳಿದ್ದಾಳೆ.

ಮಹಿಳೆಯರ ತಾರತಮ್ಯ ನೀತಿಯನ್ನು ತೊಡೆಯಲು ಶಿಕ್ಷಣಕ್ಷೇತ್ರ. ಉದ್ಯೋಗ ಧರ್ಮ, ಬಡತನ, ಸಮೂಹ ಮಾಧ್ಯಮ ರಾಜಕೀಯ ಹಕ್ಕು ಹಾಗೂ ಕುಟುಂಬ ಈ ಏಳು ಕ್ಷೇತ್ರಗಳನ್ನು ಪ್ರಭಾವಿಸುವಂತಹ ಬದಲಾವಣೆಗಾಗಿ ಹೋರಾಡುವುದು ಅವಶ್ಯಕವೆಂದು ಬೆಟ್ಟಿ ಫ್ರೀಡನ್ ಸಾರಿದರು. ಅನಂತರ ಮೇರಿ ಎಲ್ಮನ್, ಶುಲಾಮಿತ ಫೈರ್‌ಸ್ಟನ್ ಮುಂತಾದವರ ಕೃತಿಗಳು ಹಾಗೂ ಪರದೇಶದ ಸ್ತ್ರೀವಾದ ಪಂಥಗಳು ಇಲ್ಲಿಯ ಸ್ತ್ರೀವಾದಿಗಳ ಆಲೋಚನೆ ಮತ್ತು ಆಚರಣೆಗೆ ಪ್ರೇರಣೆಯ ಅಂಶಗಳಾದವು.

ಜಾಗತಿಕ ನೆಲೆಯಲ್ಲಿ ಸೃಷ್ಟಿಗೊಂಡ 'ಸ್ತ್ರೀವಾದ' ಭಾರತದ ಮೇಲೂ ತನ್ನ ಪ್ರಭಾವವನ್ನು ಬೀರಿತು. ಆದರೆ ಇತರ ಯಾವುದೇ ದೇಶಗಳಲ್ಲಿ ನಡೆದ ಸ್ತ್ರೀವಾದಿ ಚಳುವಳಿ ಭಾರತಕ್ಕೆ ನೇರವಾಗಿ ಆಮದುಗೊಳ್ಳಲಿಲ್ಲ. ಭಾರತೀಯ ಸ್ತ್ರೀಯರು ಎಚ್ಚೆತ್ತುಕೊಂಡದ್ದು ಸ್ವಾತಂತ್ರ್ಯ ಚಳುವಳಿಯಲ್ಲಿ ತಾವು ಭಾಗವಹಿಸುವ ಮೂಲಕ ಈ ಚಳುವಳಿಯಲ್ಲಿ ಸೇರುವಂತೆ ಸತಿ, ಘೋಷಾ, ಬಾಲ್ಯ ಇತ್ಯಾದಿಗಳ ವಿರುದ್ಧ ಹೋರಾಡುವಂತೆ ಪ್ರಚೋದಿಸಿದ್ದು ಮಾತ್ರ ರಾಜರಾಂ ಮೋಹನರಾಯ್, ಮಹಾತ್ಮ ಗಾಂಧೀಜಿಯಂತಹ ಪುರುಷರು, ಚಳುವಳಿಯ ಮೂಲಕ ಹೆಂಗಸರು ಮನೆಗಳಿಂದ ಹೊರ

ಬಂದರು. ದೇಶದ ಬಿಡುಗಡೆಗೆ ನಡೆದ ಚಳುವಳಿಯೊಂದಿಗೆ ತಮ್ಮ ಬಿಡುಗಡೆಯೂ ಅಗತ್ಯವಿದೆ ಎಂಬುದರ ಎಚ್ಚರ ಅವರಲ್ಲಿ ಮೂಡಿತು.

''ಸ್ತ್ರೀವಾದ ಎನ್ನುವುದು ಕೇವಲ ನಿರ್ದಿಷ್ಟ ತಾತ್ವಿಕ ಆಕಾರದೊಳಗೆ ಮಿತಗೊಳಿಸಿ ಇಡಲಾಗದು. ಸ್ತ್ರೀವಾದವು ಎಲ್ಲ ಕಾಲ, ದೇಶ, ಸಂಸ್ಕೃತಿಯ ಸ್ತ್ರೀಯರಿಗೆ ಏಕರೂಪವಾಗಿ ಅನ್ವಯಿಸುವಂತಹ ಅಮೂರ್ತ ತತ್ವವಲ್ಲ. ಸ್ತ್ರೀವಾದವನ್ನು ಕುರಿತ ನಿರ್ವಚನ ನವ್ಯವಾದುದು. ನಿರಂತರವಾಗಿ ಬದಲಾಗುವ ಐತಿಹಾಸಿಕ ಹಾಗೂ ಸಾಂಸ್ಕೃತಿಕ ವಾಸ್ತವಿಕತೆಯ ಆಧಾರದ ಮೇಲೆ ಸ್ತ್ರೀವಾದ ನಿಂತಿದೆ. ಭಿನ್ನ ಸ್ತರದ ಪ್ರಜ್ಞೆ, ಗ್ರಹಿಕೆ, ಕ್ರಿಯೆಗಳ ಸರಣಿಯನ್ನು ಆಧರಿಸಿ ಸ್ತ್ರೀವಾದದ ವ್ಯಾಖ್ಯೆ ಬಹುಮುಖಿಯಾಗಿದೆ.[೧] ಇದನ್ನು ನೋಡಿದಾಗ ಸ್ತ್ರೀವಾದಿ ಚಿಂತನೆಗಳು ಏಕಮುಖಿಯಾದುದಲ್ಲ ಇದ್ದಕ್ಕಿದ್ದಂತೆ ಉದ್ಭವಿಸಿದವಲ್ಲ ಎಂಬುದು ತಿಳಿಯುತ್ತದೆ.

ಕ್ರಿ.ಶ. ೧೯೭೦ ಉತ್ತರಾರ್ಧದಲ್ಲಿ ಪಶ್ಚಿಮದಲ್ಲಿ ಸಂಭವಿಸಿದ ಅಂತರಾಷ್ಟ್ರೀಯ ಮಹಿಳಾ ಚಳುವಳಿಯು ಮಹಿಳೆಯರ ರಾಜಕೀಯ, ಆರ್ಥಿಕ ಹಕ್ಕುಗಳು, ಜನಾಂಗೀಯ ಗುಲಾಮಗಿರಿಯ ಪದ್ಧತಿ ಮುಂತಾದ ಧ್ಯೇಯವನ್ನು ಹೊಂದಿದ್ದು. ಈ ಚಳುವಳಿಯ ಕಾವಿನಿಂದ ಸ್ತ್ರೀವಾದಿ ವಿಮರ್ಶೆಯು ಹುಟ್ಟಿತು. ಆರಂಭದ ಹಂತದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯು ಸಾಹಿತ್ಯದಲ್ಲಿನ ರೂಢಿಗತವಾದ ಸ್ತ್ರೀ ದ್ವೇಷದ ಅಂಶಗಳನ್ನು, ಸ್ತ್ರೀಯರನ್ನು ದೇವತೆ-ರಾಕ್ಷಸಿಯರ ಸಿದ್ಧ ಪ್ರತೀಕಗಳಲ್ಲಿ ಚಿತ್ರಿಸುವುದನ್ನು ಶ್ರೇಷ್ಠ ಕೃತಿಗಳಲ್ಲೂ, ಜನಪ್ರಿಯ ಸಾಹಿತ್ಯದಲ್ಲೂ ಸಾಹಿತ್ಯಿಕವಾದ ಸ್ತ್ರೀ ನಿಂದನೆ, ಬೆದರಿಕೆ ತಂತ್ರಗಳಿರುವುದನ್ನು ಹಾಗೂ ಸಾಹಿತ್ಯ ಚರಿತ್ರೆಯಿಂದ ಮಹಿಳೆಯರು ಹೊರಗಿಡಲ್ಪಟ್ಟಿರುವುದನ್ನು ಬಯಲಿಗೆಳೆಯುತ್ತ ತನ್ನ ಗಮನವನ್ನು ಕೇಂದ್ರೀಕರಿಸಿತ್ತು.

ನಂತರದ ಹಂತದಲ್ಲಿ ಸ್ತ್ರೀವಾದದ ಎರಡನೇ ಅಲೆಯೊಂದು ಎದ್ದಾಗ ಮಹಿಳಾ ಬರಹಗಾರರಿಗೆ ಅವರದೇ ಆದ ಸಾಹಿತ್ಯ ಪರಂಪರೆಯೊಂದು ಇರುವುದನ್ನು ಸ್ತ್ರೀವಾದಿ ವಿಮರ್ಶಕರು ಗುರುತಿಸಿಕೊಟ್ಟರು. ಈ ಪರಂಪರೆಯು ಚಾರಿತ್ರಿಕ ಮತ್ತು ವಸ್ತುವಿನ ಸ್ಪಷ್ಟತೆ ಅದರ ಕಲಾತ್ಮಕತೆಗಳು ಪಿತೃಪ್ರಧಾನದ ಮೌಲ್ಯಗಳಿಂದ ಮಸುಕುಗೊಳಿಸಲ್ಪಟ್ಟಿರುವುದನ್ನು ಎತ್ತಿ ತೋರಿಸಿದರು. ಎಲ್ಲಾ ದೇಶಗಳ ವಿವಿಧ ಚಾರಿತ್ರಿಕ ಕಾಲಘಟ್ಟಗಳ ಮಹಿಳಾ

ಬರಹಗಾರರನ್ನು ಹುಡುಕಿ ತೆಗೆದು ಮರು ಓದಿಗೆ ಒಳಗು ಮಾಡುವ ಪ್ರಯತ್ನಗಳು ರಾಶಿರಾಶಿಯಾಗಿ ಪ್ರಕಟವಾದವು. ವ್ಯಕ್ತಿಗತವಾದ ಮಹಿಳಾ ಪ್ರತಿಭೆಗೂ ಸಾಹಿತ್ಯ ಪರಂಪರೆಗೂ ಇರುವ ಸಂಬಂಧವನ್ನು ಸ್ಥಾಪಿಸಲು ಹೊಸ ಸಾಹಿತ್ಯಿಕ ಜೀವನಚರಿತ್ರೆಗಳನ್ನು ಕಟ್ಟಿಕೊಡುವ ಯತ್ನಗಳು ನಡೆದವು.

ಎಂಬತ್ತರ ದಶಕದಿಂದ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯು ಮತ್ತಷ್ಟು ವ್ಯಾಪಕವಾಗಿ ಬೆಳೆದಿದ್ದು ಲಿಂಗಪ್ರಬೇಧ ಮತ್ತು ಲೈಂಗಿಕತೆಗಳು ಸಾಹಿತ್ಯಚರ್ಚೆಯಲ್ಲಿ ಕಾಣಿಸಿಕೊಳ್ಳುವ ಸಾಂಕೇತಿಕ ರಚನೆಗಳ ವಿಶ್ಲೇಷಣೆಗೆ ಅದು ಯತ್ನಿಸುತ್ತಿದೆ. ವಿವಿಧ ಜ್ಞಾನ ಶಾಖೆಗಳಲ್ಲಿ ಸ್ತ್ರೀವಾದಿ ಚಿಂತನೆಯ ಫಲವಾದ ಅಧ್ಯಯನ, ಸಂಶೋಧನೆಗಳು ವ್ಯಾಪಕವಾಗಿ ಬೆಳೆದಿದ್ದು ಈ ಸಾಹಿತ್ಯ ವಿಮರ್ಶೆ ಎಂಬುದು ಅಂತಶ್ಯಾಸ್ತ್ರೀಯ ಅಧ್ಯಯನ ವ್ಯಾಪ್ತಿಯಲ್ಲಿ ತನ್ನ ವಿದ್ವತ್ತನ್ನು ಬೆಳೆಸಿಕೊಳ್ಳ ತೊಡಗಿದೆ.

''ಲಿಂಗತಾರತಮ್ಯ ಪಿತೃಪ್ರಧಾನ ವ್ಯವಸ್ಥೆಯೊಳಗಿನ ಹೆಣ್ಣಿನ ನೆಲೆಯ ನಿಜಸ್ವರೂಪ, ಈ ವ್ಯವಸ್ಥೆ ರೂಪಿಸಿರುವ ಸಂಸ್ಕೃತಿ ಹಾಗೂ ಸಾಂಸ್ಕೃತಿಕ ಅಭಿವ್ಯಕ್ತಿಯಾದ ಸಾಹಿತ್ಯ ಕಲೆಗಳ ವಿಶ್ಲೇಷಣೆ ಮಾಡಿ, ಸಾಹಿತ್ಯದ ಭಾಷೆಯು ಘಟಕಗಳ ಚೌಕಟ್ಟು ಕಳಚಿ ಸಂಕೇತಗಳ ಒಳಾರ್ಥವನ್ನು ನಿರಚಿಸುವುದು ಪಶ್ಚಿಮ ದೇಶಗಳಲ್ಲಿ ಬರೆದಿರುವ ಸ್ತ್ರೀವಾದಿ ವಿಮರ್ಶೆಯ ವಿವಿಧ ವಿಚಾರಧಾರೆಗಳ ಮುಖ್ಯ ಗುರಿಯಾಗಿದೆ.''[೨] ಹೆಣ್ಣಿನ ಅನುಭವದ ನೆಲೆಯಿಂದ ಆಕೆಯ ಅನುಭವದ ನಿಟ್ಟಿನಿಂದ ಮಹಿಳೆಯರನ್ನು ಅಂಚಿಗೆ ತಳ್ಳಿರುವ ಪರಂಪರೆಯನ್ನು ಸ್ಥಾನಪಲ್ಲಟಗೊಳಿಸಲು, ಬದಲಿಸಲು ಈ ವಿಮರ್ಶೆ ಯತ್ನಿಸುತ್ತದೆ.

### ಅಧ್ಯಯನದ ಉದ್ದೇಶ

ಅಂತರರಾಷ್ಟ್ರೀಯ ಮಹಿಳಾ ವರ್ಷದ ಘೋಷಣೆಯಾದಂದಿನಿಂದ ದೇಶದಲ್ಲಿ ಮಹಿಳಾ ಚಟುವಟಿಕೆಗಳು ಬಿರುಸಿನಿಂದ ಸಾಗಿವೆ. ಇದರ ಮುಖ್ಯ ಉದ್ದೇಶ ಸ್ತ್ರೀಯರು ಮತ್ತು ಪುರುಷರಲ್ಲಿ ಸಮಾನತೆ ಇರಬೇಕು, ಸಮಾನ ಗೌರವವನ್ನು ಪಡೆಯಬೇಕು. ಹಾಗೂ ಘನತೆಯನ್ನು ಸಾಧಿಸಬೇಕು. ಸೌಂದರ್ಯಕ್ಕಿಂತ ಸ್ತ್ರೀಯ ಪ್ರತಿಭೆ ಮತ್ತು ಸಾಮರ್ಥ್ಯಗಳು ಮುಖ್ಯವಾಗಬೇಕು. ಈಗಿನ ಸಮಾಜವನ್ನು ಉಭಯಲಿಂಗಿ ದೃಷ್ಟಿಕೋನದ ಮೇಲೆ ಆರೋಗ್ಯಕರವಾಗಿ ಪರಿವರ್ತನೆಗೊಳಿಸಬೇಕು. ಕೌಟುಂಬಿಕ ಜವಾಬ್ದಾರಿಗಳು

ಮಹಿಳೆಗೆ ಮಾತ್ರ ಅನಿವಾರ್ಯ ಎಂದಾಗದೇ ಸಮಾನವಾಗಿ ಹಂಚಿಕೆಯಾಗಬೇಕು. ಸ್ತ್ರೀಗೆ ಸಂಬಂಧಿಸಿದ ವಿಷಯಕ್ಕೆ ಮನೆಯ ಒಳಗೆ - ಹೊರಗೆ ತನ್ನ ಬದುಕು ಹಾಗೂ ದೇಹಗಳ ಮೇಲೆ ತಮ್ಮದೇ ಹಿಡಿತವನ್ನು ಹೊಂದಬೇಕು ಹಾಗೂ ಆಯ್ಕೆಯ ಸ್ವಾತಂತ್ರ್ಯವನ್ನು ಪಡೆಯಬೇಕು. ಸಮಾಜದ ಪದ್ಧತಿಯಲ್ಲಿ, ವ್ಯವಸ್ಥೆಯಲ್ಲಿ ಸ್ತ್ರೀ ಪುರುಷರ ನಡುವೆ ಇರುವ ತಾರತಮ್ಯವನ್ನು ನಿವಾರಿಸಿ ಇಬ್ಬರನ್ನು ಸಮಾನ ರೀತಿಯಲ್ಲಿ ನಡೆಸಿಕೊಳ್ಳುವಂಥ ಒಂದು ಪರ್ಯಾಯ ಸಮಾಜವನ್ನು ಕಟ್ಟಬೇಕು. ಸಮಾಜ ಮತ್ತು ಪುರುಷರಿಂದಾಗುವ ಎಲ್ಲಾ ರೀತಿಯ ತುಳಿತಗಳಿಂದ ಮಹಿಳೆ ಬಿಡುಗಡೆ ಹೊಂದಬೇಕು. ಕುಟುಂಬದಲ್ಲಿ ನಡೆಯುವ ಎಲ್ಲಾ ತಪ್ಪಿಗೂ ಹೆಣ್ಣನ್ನೇ ಹೊಣೆಯಾಗಿಸಿ ಶಿಕ್ಷಿಸುವುದನ್ನು ತಪ್ಪಿಸಿ, ನಿಜವಾದ ತಪ್ಪಿತಸ್ಥರಿಗೆ ಶಿಕ್ಷೆಯಾಗಬೇಕು.

ಸ್ತ್ರೀವಾದವೆಂಬುದು ಪುರುಷ ಪ್ರಧಾನ ಮತ ಮತ್ತು ಸಾಮಾಜಿಕ ಸಂರಚನೆಯನ್ನು ವಿಮರ್ಶಿಸುವಂಥ ಚಳುವಳಿ. ಸ್ತ್ರೀವಾದದ ಪ್ರಕಾರ ಪುರುಷ ಪ್ರಧಾನತೆಯ ನಿರ್ದಿಷ್ಟ ಚಾರಿತ್ರಿಕ ಸನ್ನಿವೇಶದ ಫಲವೇ ಹೊರತು ಸಹಜವಾದುದೇನೂ ಅಲ್ಲ. ಆದ್ದರಿಂದ ಪುರುಷ ಪ್ರಧಾನತೆಯ ಈ ಪರಿಸ್ಥಿತಿಯನ್ನು ಬದಲಾಯಿಸುವುದು ಸಾಧ್ಯ. ಇತಿಹಾಸವನ್ನು ಗಮನಿಸಿದರೆ ಉದ್ದಕ್ಕೂ ಪುರುಷರು ಸ್ತ್ರೀಯರನ್ನು ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಇದು ಬಹುಮಟ್ಟಿಗೆ ಲಿಂಗಬೇಧವನ್ನು ಆಧರಿಸುವಂಥದು. ಈ ಅಸಮಾನ ಸಂಬಂಧದ ಸ್ಥಿತಿಯನ್ನು ಬದಲಾಯಿಸಬೇಕೆನ್ನುವುದು ಸ್ತ್ರೀವಾದಿಗಳ ನಿಲುವು. ಮಹಿಳೆಯ ಅನುಭವ, ಚರಿತ್ರೆಗಳನ್ನು ಹೊಸ ರೀತಿಯಲ್ಲಿ ವ್ಯಾಖ್ಯಾನಿಸಿ ಅಸಮಾನತೆಯ ಈ ಯಥಾಸ್ಥಿತಿಯನ್ನು ಬದಲಾಯಿಸಬಹುದಾದ ಗಂಭೀರ ಪ್ರಯತ್ನವೇ ಸ್ತ್ರೀವಾದಿ ಚಳುವಳಿಯ ಉದ್ದೇಶ.

ಕಮಲಾ ಭಾಸಿನ್ ಮತ್ತು ನಿಘಾತ ಸಯ್ಯದ್‌ಖಾನ್‌ರವರು ಬರೆದ ಸ್ತ್ರೀವಾದ ದಕ್ಷಿಣ ಏಷ್ಯಾದಲ್ಲಿ ಅದರ ಪ್ರಸುತ್ತತೆ (ಅನು. ವೆಂ.ವನಜ ಮತ್ತು ಎಚ್.ಆರ್. ರಾಜೇಶ್ವರ) ಎಂಬ ಪುಸ್ತಕದಲ್ಲಿ ಈ ರೀತಿ ಹೇಳಿದ್ದಾರೆ. 'ಸಮಾಜದಲ್ಲಿ ಉದ್ಯೋಗದಲ್ಲಿ ಮತ್ತು ಕುಟುಂಬಗಳಲ್ಲಿ ಮಹಿಳೆಯರ ತುಳಿತ ಮತ್ತು ಶೋಷಣೆಯ ಬಗ್ಗೆ ಅರಿವು ಮೂಡಿಸಿ ಈ ಪರಿಸ್ಥಿತಿಯನ್ನು ಬದಲಾಯಿಸುವುದಕ್ಕಾಗಿ ಪುರುಷರು ಮತ್ತು ಮಹಿಳೆಯರು ಸೇರಿ

ನಡೆಸುವ ಪ್ರಜ್ಞಾಪೂರ್ವಕವಾದ ಕ್ರಿಯೆಯೆ ಸ್ತ್ರೀವಾದ.''[೩] ಇದರ ಮೂಲ ಉದ್ದೇಶ ಇದೇ ಆಗಿದೆ.

ವಿವಿಧ ಜ್ಞಾನಶಾಖೆಗಳಲ್ಲಿ ಸ್ತ್ರೀವಾದಿ ದೃಷ್ಟಿಕೋನವನ್ನು ಅಳವಡಿಸುವದು ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಡಲು ದಿಟ್ಟ ಮನೋಭಾವವನ್ನು ಸ್ವಸಮರ್ಥನೆಯ ಸಾಮರ್ಥ್ಯವನ್ನು ಬೆಳೆಸುವುದು ಹಾಗೂ ಅಭಿವೃದ್ಧಿಯ ಎಲ್ಲಾ ಕ್ಷೇತ್ರಗಳಲ್ಲಿ ಸಕ್ರಿಯ ಸಮಭಾಗಿತ್ವ ಮತ್ತು ಅಸಮಾನತೆಯ ವಿರುದ್ಧದ ಹೋರಾಟಕ್ಕೆ ಸಜ್ಜುಗೊಳಿಸುವುದು ಮತ್ತು ನಿಷ್ಪಕ್ಷಪಾತ ಸಮಾಜಕ್ಕಾಗಿ, ರಾಜಕೀಯ ಸ್ಥಾನಮಾನದ ವಾಸ್ತವಿಕ ತಿಳುವಳಿಕೆ ಹೊಂದುವಲ್ಲಿ ಮಹಿಳೆಯನ್ನು ಸಮರ್ಥಗೊಳಿಸುವುದು ಇವುಗಳೆಲ್ಲವೂ ಸ್ತ್ರೀವಾದಿ ಅಧ್ಯಯನದ ಮುಖ್ಯ ಉದ್ದೇಶಗಳಾಗಿವೆ.

'ಮಹಿಳಾ ಅಧ್ಯಯನ ಮಹಿಳೆಯ ದೈಹಿಕ ಹಾಗೂ ಮಾನಸಿಕ ಆರೋಗ್ಯದ ಕಡೆಗೆ ಗಮನ ಹರಿಸುತ್ತದೆ. ಅಪೌಷ್ಠಿಕ ಆಹಾರ, ಬಿಡುವಿಲ್ಲದ ದುಡಿತ, ಅತಿ ಹೆಚ್ಚಿನ ಜವಾಬ್ದಾರಿಗಳು, ಲೈಂಗಿಕ ಶೋಷಣೆಗಳು, ಪದೇಪದೇ ಅನುಭವಿಸುತ್ತಿರುವ ಬಸಿರು-ಬಾಣಂತನಗಳು, ಮಗುವಿನ ಲಾಲನೆ-ಪಾಲನೆಗಳು, ಮಾನಸಿಕ ಒತ್ತಡಗಳು, ದೈಹಿಕ ದುರ್ಬಲತೆ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಗಂಭೀರವಾಗಿ ಚಿಂತಿಸುತ್ತದೆ.'[೪] ಇದೂ ಕೂಡ ಸ್ತ್ರೀವಾದಿಗಳ ಮುಖ್ಯ ಗುರಿಯಾಗಿದೆ.

ಮಹಿಳೆಯರ ನೇತೃತ್ವದಲ್ಲಿಯೇ ಮಹಿಳಾ ಚಳುವಳಿಗೆ ಒಂದು ಉತ್ತೇಜಕ ತಿರುವು ಸಿಕ್ಕಿದೆ. ಬದಲಾದ ಸಾಮಾಜಿಕ, ಸಾಂಸ್ಕೃತಿಕ ಪರಿಸರದಲ್ಲಿ ಮಹಿಳಾ ಸಮಸ್ಯೆಗಳ ಸ್ವರೂಪವೇ ಬದಲಾಗಿದೆ. ಬಾಲ್ಯವಿವಾಹ, ವಿಧವಾ ವಿವಾಹ, ಅಂತರ್ಜಾತಿಯ ವಿವಾಹ, ಸ್ತ್ರೀಶಿಕ್ಷಣ, ಇವುಗಳೆಲ್ಲಾ ಹಿಂದಿದ್ದ ರೀತಿಯಲ್ಲಿ ಈಗ ಸಮಸ್ಯೆಗಳಾಗಿಲ್ಲ. ಹತ್ತು ಹಲವಾರು ಕಾರಣಗಳಿಂದ ಹೆಚ್ಚುತ್ತಿರುವ ಅತ್ಯಾಚಾರ ಪ್ರಕರಣಗಳು, ವರದಕ್ಷಿಣೆ ಸಾವುಗಳು, ಸ್ತ್ರೀಭ್ರೂಣ ಹತ್ಯೆಗಳು ಮುಂತಾದ ಸಮಸ್ಯೆಗಳು ಈಗ ಈ ಮಹಿಳಾ ಚಳುವಳಿ ಎದುರಿಸುತ್ತಿರುವ ಸವಾಲುಗಳಾಗಿವೆ.

ಚಂದ್ರಶೇಖರ ಕಂಬಾರರ 'ಜೋಕುಮಾರ ಸ್ವಾಮಿ' ಹಾಗೂ ಫೆಡೆರಿಕೊ ಗಾರ್ಸಿಯಾ ಲೋರ್ಕಾರ '' ಎರ್ಮಾ'' ನಾಟಕಗಳಲ್ಲಿ ನಾವು ಹೆಣ್ಣಿಗೆ ಯಾವುದೇ ವಿಷಯದಲ್ಲೂ

ಸ್ವತಂತ್ರವಿಲ್ಲದ ಸ್ಥಿತಿ ಹಾಗೂ ಗಂಡಿನ ಅಧಿಕಾರವನ್ನು ಗುರುತಿಸಬಹುದು. ಅವಳಿಗೆ ಬೇಕಾಗಿರುವುದು ಊಟ ಮತ್ತು ಬಟ್ಟೆ ಮತ್ತು ಮನೆಯೇ ಹೊರತು ಅದರ ಆಚೆಗೆ ಸ್ವತಂತ್ರವಾಗಿ ಚಿಂತಿಸುವ, ಆಲೋಚಿಸುವ ಹಕ್ಕುಗಳಿಲ್ಲದಂತೆ ಮಾಡುವ ಕ್ರೌರ್ಯವು ವ್ಯಕ್ತವಾಗಿದೆ.

ಹೆಣ್ಣು ಮನೆಯಲ್ಲೇ ತನ್ನ ಕನಸು ಕಲ್ಪನೆಗಳನ್ನು ಕಟ್ಟಿಕೊಂಡು ಪುರುಷ ಸೃಷ್ಟಿಸಿರುವ ಸಮಾಜದ ಕೆಸರಿನಲ್ಲಿಕೊಳೆತು ಹೋಗುವುದನ್ನು ಹಾಗೂ ಹೋಗುತ್ತಿರುವುದನ್ನು ನೋಡಬಹುದು. ಗಂಡಂದಿರು ತಮ್ಮ ಸಮರ್ಥನೆಗಾಗಿ ಸಮಾಜದ ವಿಕೃತ ಮುಖವಾಡಗಳನ್ನು ಬಳಸಿಕೊಂಡು ಹೆಂಡತಿಯರನ್ನು ಮನೆಯ ಬಂಧನದಲ್ಲಿಡಲು ಪ್ರಯತ್ನಿಸುವುದನ್ನು ಈ ನಾಟಕಗಳಲ್ಲಿ ನೋಡಬಹುದು.

ತಾಯ್ತನ ಇಲ್ಲದಿದ್ದರೆ ಹೆಣ್ಣಿನ ಬದುಕು ನಶ್ವರ, ಅವಳಿಗೆ ಎಲ್ಲಿಯೂ ಮೋಕ್ಷ ದೊರೆಯದು ಎನ್ನುವ ಧಾರ್ಮಿಕತೆ, ಪಾರಂಪರಿಕ ಸಂಕಥನಗಳು ಆ ಹೆಣ್ಣಿನ ಸುಖ-ಸಂತೋಷಗಳನ್ನು ಹೇಗೆ ಬಲಿತೆಗೆದುಕೊಂಡು ಬಿಡುತ್ತದೆ. ಈ ಎಲ್ಲಾ ನಿಲುವುಗಳನ್ನು ಈ ನಾಟಕಗಳು ಪ್ರಶ್ನಿಸುತ್ತದೆ.

ಹೆಣ್ಣು ಶ್ರೀಮಂತೆಯಾದರೂ ಕೂಡ ಅವಳ ದಮನಕ್ಕೇನೂ ಕಡಿಮೆಯಿಲ್ಲ. ಹೆಣ್ಣು ಬಡವಳಾದರಂತೂ ಅವಳ ಸ್ಥಿತಿ ಇನ್ನೂ ಶೋಚನೀಯ. ಆಳುವ ವರ್ಗ ಆಳಿಸಿಕೊಳ್ಳುವ ವರ್ಗವನ್ನು ಹೇಗೆ ನಿಯಂತ್ರಣದಲ್ಲಿಟ್ಟು ಕೊಂಡಿದೆ. ದೆವ್ವ ಮತ್ತು ದೇವರ ಕಲ್ಪನೆ ಇವೆಲ್ಲವೂ ಎಲ್ಲಾ ಕಾಲದಲ್ಲಿಯೂ ಪ್ರಸ್ತುತತೆಯನ್ನು ಒಳಗೊಂಡಿದೆ. ಆದರೆ ಈ ಎಲ್ಲಾ ಕಟ್ಟುಪಾಡುಗಳನ್ನು ಬದಿಗೊತ್ತಿ ಎಲ್ಲರಿಗೂ ಸಮಾನತೆಯನ್ನು ತರಬೇಕಾಗಿದೆ. ಈ ನಾಟಕಗಳಲ್ಲಿ ಬರುವ ಹೆಣ್ಣುಗಳು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ನೊಂದು-ಬೆಂದು ಕೊನೆಗೆ ಪುರುಷ ಅಧಿಕಾರವನ್ನು ಪ್ರಶ್ನಿಸುವ ಆ ವ್ಯವಸ್ಥೆಯ ಕ್ರೌರ್ಯವನ್ನು ಮುರಿಯುವ ಮತ್ತು ಸ್ವತಂತ್ರ ಹಾಗೂ ಸಮಾನತೆ ಕಡೆ ಚಲಿಸುವಂತದ್ದನ್ನು ನೋಡಬಹುದು.

ನನ್ನ ಅಧ್ಯಯನವು ಈ ಎರಡು ವಿಭಿನ್ನ ಸಂಸ್ಕೃತಿಗಳ ಹಿನ್ನೆಲೆಯಲ್ಲಿ ಹೆಣ್ಣಿನ ಸಂವೇದನೆ, ಆಸೆ ಬಯಕೆ, ಆಶಯಗಳು, ಸಮಸ್ಯೆಗಳು, ಅವರು ಬದುಕನ್ನು ಎದುರಿಸುವ ಕ್ರಮ ಇತ್ಯಾದಿಗಳನ್ನು ತೌಲನಿಕವಾಗಿ ಅಭ್ಯಸಿಸುವ ಗುರಿಯನ್ನು ಹೊಂದಿದೆ.

ಅಡಿಟಿಪ್ಪಣಿಗಳು

೧. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು : ಡಾ. ಪ್ರೀತಿ ಶುಭಚಂದ್ರ, ಪುಟ-೨೯

೨. ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು : ಡಾ. ಬಿ.ಎನ್. ಸುಮಿತ್ರಾಬಾಯಿ, ಪುಟ-೨

೩. ಸ್ತ್ರೀವಾದ - ಸಾಹಿತ್ಯದ ಒಂದು ಚಳುವಳಿ ಮತ್ತು ಇತರ ಲೇಖನಗಳು : ಕೆ.ಎಂ. ವಿಜಯಲಕ್ಷ್ಮಿ, ಪುಟ-೪, ಇಲ್ಲಿ ಉಲ್ಲೇಖಿತ

೪. ಬೈದವ್ವ ಕೇಳಾ ನನ ಮಾತಾ.. : ಡಾ. ಡಿ. ಮಂಗಳಾ ಪ್ರಿಯದರ್ಶಿನಿ, ಪುಟ-೧೩

# ಅಧ್ಯಾಯ - ೨

## ಪ್ರಧಾನ ಸಂಸ್ಕೃತಿಯ ಹೆಣ್ಣಿನ ನಿರ್ವಚನ

ಹೆಣ್ಣು ಬಾಲ್ಯದಲ್ಲಿ ತಂದೆಯ ರಕ್ಷಣೆಯಲ್ಲಿಯೂ, ಯೌವ್ವನದಲ್ಲಿ ಪತಿಯ ರಕ್ಷಣೆಯಲ್ಲಿಯೂ ಇರಬೇಕೆಂದು ಮನು ಮುಂತಾದವರು ಹೇಳಿದ್ದಾರೆ. ಅಂದರೆ ಅವಳಿಗೆ ಎಲ್ಲಿಯೂ ಸ್ವತಂತ್ರ ಜೀವನ ಎಂಬುದೇ ಇಲ್ಲ. ಎಲ್ಲಿ ಸ್ತ್ರೀಯರು ಪೂಜಿಸಲ್ಪಡುತ್ತಾರೋ ಅಲ್ಲಿ ದೇವತೆಗಳು ರಮಿಸುತ್ತಾರೆ ಎಂದು ಹೇಳಿದ ನಮ್ಮ ಪ್ರಾಚೀನ ಹಿಂದೂ ಸಂಸ್ಕೃತಿಯ ಒಡಲಲ್ಲೇ ಹೆಣ್ಣಿಗೆ ಸ್ವಾತಂತ್ರ್ಯವನ್ನು ನಿರಾಕರಿಸಿದ ಆ ಸಂಸ್ಕೃತಿಯು ಅವಳಿಗೆ ಸಂಕೋಲೆಯನ್ನು ಬಿಗಿದು ದನಿಯೆತ್ತದಂತೆ ಮಾಡಿದೆ. ಹುಟ್ಟಿನಿಂದ ಹಿಡಿದು ಜೀವನದುದ್ದಕ್ಕೂ ಹೆಣ್ಣಿನ ಆಸೆ ಆಕಾಂಕ್ಷೆಗಳನ್ನು ಜೀವನ ವಿಧಾನಗಳನ್ನು ಪುರುಷ ಸಮಾಜ ವ್ಯವಸ್ಥೆಯು ನಿಯಂತ್ರಿಸುತ್ತಲೇ ಇರುತ್ತದೆ.

ಋಗ್ವೇದದ ಕೊನೆಯ ಹಂತಕ್ಕೆ ಸೇರುವ ೧೦ನೇ ಮಂಡಲದಲ್ಲಿ ಪುರೂರವ - ಊರ್ವಶಿಯರ ಸಂವಾದವೊಂದರಲ್ಲಿ ಈ ರೀತಿ ಬರುತ್ತದೆ. ಮಹಿಳೆಯೊಬ್ಬರ ಬಾಯಲ್ಲಿ ಕವಿ ಈ ರೀತಿ ಹೇಳಿಸಿದ್ದಾರೆ. 'ನ ವೈ ಸ್ತ್ರೈಣಾನಿ ಸಖ್ಯಾನಿ ಸಂತಿ ಸಾಲಾವೃಕಾಣಾಂ ಹೃದಯಾನ್ಯೇತಾ' (ಸ್ತ್ರೀಯರು ಸ್ನೇಹಕ್ಕೆ ಯೋಗ್ಯರಲ್ಲ. ಅವರ ಹೃದಯಗಳು ತೋಳಗಳ ಹೃದಯದಂತೆ) ಇಂತಹ ಮಾತನ್ನು ಹೆಣ್ಣಿನ ಬಾಯಲ್ಲಿ ಹೇಳಿಸುವುದರ ವ್ಯಂಗ್ಯವನ್ನು ಗಮನಿಸಿದಾಗ ಅಂದಿನ ಸಮಾಜದಲ್ಲಿ ಮಹಿಳೆಯನ್ನು ಕುರಿತಂತೆ ಇದ್ದ ಪುರುಷ ಮನೋಭಾವವು ಎಂಥದ್ದಾಗಿತ್ತೆಂಬುದು ವ್ಯಕ್ತವಾಗುತ್ತದೆ.

ಮಹಿಳೆಯರ ನಿಜವಾದ ಸ್ಥಾನದ ಬಗ್ಗೆ ವರ್ಜೀನಿಯ ವುಲ್ಫ್ ಈ ರೀತಿ ಹೇಳಿದ್ದಾರೆ. ''ಕಾಲ್ಪನಿಕವಾಗಿ ಮಹಿಳೆಗೆ ಅತ್ಯಂತ ಮಹತ್ವದ ಸ್ಥಾನವಿದೆ. ಆದರೆ ವಾಸ್ತವಿಕವಾಗಿ ಅವಳು ಸಂಪೂರ್ಣವಾಗಿ ಅಸಡ್ಡೆಗೊಳಪಟ್ಟಿದ್ದಾಳೆ. ಕಾವ್ಯದಲ್ಲಿ ಮೊದಲಿನಿಂದ ಕೊನೆಯವರೆಗೂ ಅವಳೇ ವ್ಯಾಪಿಸಿರುತ್ತಾಳೆ. ಆದರೆ ಚರಿತ್ರೆಯಿಂದ ಮಾತ್ರ ಗೈರುಹಾಜರಾಗಿದ್ದಾಳೆ. ಕಾಲ್ಪನಿಕ ಬರಹಗಳಲ್ಲಿ ಆಕೆ ರಾಜ ಮಹಾರಾಜರನ್ನು, ದಿಗ್ವಿಜಯಿಗಳನ್ನೂ ಆಳುತ್ತಿರುತ್ತಾಳೆ. ನಿಜ ಜೀವನದಲ್ಲಿ ಉಂಗುರ ತೊಡಿಸಿದ ಯಾವುದೇ ಹುಡುಗನ ಆಳಾಗುತ್ತಾಳೆ. ಸಾಹಿತ್ಯದಲ್ಲಿನ

ಕೆಲವು ಅತ್ಯಂತ ಸ್ಫೂರ್ತಿದಾಯಕ ಶಬ್ದಗಳನ್ನು ಗಾಡ ಚಿಂತನೆಗಳನ್ನು ಆಡುವ ಆಕೆ ನಿಜಜೀವನದಲ್ಲಿ ಓದಲಾರದ,ಮಾತುಬಾರದ. ಮೂಢೆಯಾಗಿದ್ದಾಳೆ. ಕೇವಲ ತನ್ನ ಗಂಡನ ಆಸ್ತಿಯಾಗಿದ್ದಾಳೆ.''[1]

ಹೆಣ್ಣು ಸಂಸ್ಕೃತಿ ರಕ್ಷಕಳು ಎಂಬ ಬಿರುದಿನ ಮಾದಕತೆಯಿಂದ ಹೊರಬರಲಾರದ ವಿಸ್ಮೃತಿಯಲ್ಲಿ ಇದ್ದಾಳೆ. ಇದರ ದುರ್ಬಳಕೆಯನ್ನು ಪುರುಷ ಮಾಡಿಕೊಂಡು ಹೆಣ್ಣನ್ನು ನಿಯಂತ್ರಿಸುತ್ತಲೇ ಇರುತ್ತಾನೆ.''ಹೆಣ್ಣಾಗಿ ಯಾರೂ ಹುಟ್ಟುವುದಿಲ್ಲ ನಂತರ ರೂಪಿತವಾಗುತ್ತಾಳಷ್ಟೆ'' ಎಂಬ ಸಿಮೊನ್‌ದ ಬೋವಾರವರ ಮಾತಿನಂತೆ ಅವಳು ಪುರುಷರಿಂದ ರೂಪಿತವಾಗಿದ್ದಾಳೆ.

ಹೆಂಗಸು ಯಾವಾಗಲೂ ಆಶ್ರಿತಳೇ ಮತ್ತು ಗಂಡಸು ಆಕೆಯನ್ನು ರಕ್ಷಿಸುವವನು ಎಂಬ ಈ ಗ್ರಹಿಕೆ ಇಂದಿನ ಸಮಾಜದಲ್ಲಿ ಇರುವುದು ಶೋಚನೀಯ . ಹಿಂದೆ ನಮ್ಮ 'ಪ್ರಾಚೀನ ಕವಿಗಳು ಸಂಪತ್ತನ್ನು, ರಾಜ್ಯವನ್ನು, ವಿಜಯವನ್ನು ಹೆಣ್ಣಿಗೆ ಹೋಲಿಸಿದ್ದಾರೆ. ಇಲ್ಲಿಹೆಣ್ಣು ಗಂಡಸಿನ ಗಳಿಕೆ ಮತ್ತು ಅವನಿಗೆ ಅಧೀನಳೆಂಬುದನ್ನು ಒತ್ತಿ ಹೇಳಿದ್ದಾರೆ. ವಿಜಯ ಮತ್ತು ಹೆಣ್ಣು ಇವೆರಡೂ ಚಂಚಲವಾದವು ಎಂಬುದನ್ನು ಮತ್ತು ಇವೆರಡೂ ಬಲಶಾಲಿಗಳ ಆಶ್ರಯಕ್ಕಾಗಿ ಸದಾ ಹಾತೊರೆಯುತ್ತಿರುತ್ತವೆ ಎಂಬುದನ್ನೂ ಹೇಳಿದ್ದಾರೆ. ಇವರಿಗೆ ಸ್ತ್ರೀ ಮಾನವ ಜಗತ್ತಿನ ಒಂದು ಪ್ರಮುಖ ಭಾಗವಾಗಿ ಕಾಣದೆ ಪುರುಷ ಜಗತ್ತಿನ ಒಂದು ವಿನ್ಯಾಸವಾಗಿ ಮಾತ್ರ ಕಾಣಿಸಿವೆ''[2] ಸ್ತ್ರೀಯರನ್ನು ದೇವತೆ ಮತ್ತು ರಾಕ್ಷಸಿ ಎಂಬ ಎರಡು ದೃಷ್ಟಿಕೋನದಿಂದ ಮಾತ್ರ ನಮ್ಮ ಪುರಾಣೇತಿಹಾಸದಲ್ಲಿ ಚಿತ್ರಿಸಲಾಗಿದೆ. ಜನಪ್ರಿಯ ಮತ್ತು ಶ್ರೇಷ್ಠಕೃತಿಗಳಲ್ಲಿ ಸಾಹಿತ್ಯಿಕವಾದ ಸ್ತ್ರೀನಿಂದನೆ ಬೆದರಿಕೆ ತಂತ್ರಗಳಿರುವುದನ್ನು ನಾವು ನೋಡಬಹುದು. ಇದರ ಉದ್ದೇಶ ಸ್ತ್ರೀಯರನ್ನು ಸಾಹಿತ್ಯ ಚರಿತ್ರೆಯಿಂದ ಹೊರಗಿಡುವುದೇ ಆಗಿದೆ.

ಮಾನವ ಬದುಕಿನ ಇತಿಹಾಸವನ್ನು ಗಮನಿಸಿದಾಗ ಆದಿಮಾನವನಂಥ ಕಾಲದಲ್ಲಿ ಸಮುದಾಯಗಳ ಯಜಮಾನಿಕೆ ಹೆಣ್ಣಿನಲ್ಲೇ ಕೇಂದ್ರವಾಗಿದ್ದನ್ನು ಗಮನಿಸಬಹುದಾಗಿದೆ. ಸ್ತ್ರೀಯ ಸೃಷ್ಟಿಶಕ್ತಿ ಆಕೆಯನ್ನು ಪೂಜ್ಯನೀಯವಾಗಿಸಿದ್ದವು. ಪುರಾಣದ ಆದಿಶಕ್ತಿಯನ್ನು, ಮಲೆಮಾದೇಶ್ವರನಂಥ ಜನಪದ ಮಹಾಕಾವ್ಯಗಳನ್ನು ಗಮನಿಸಿದಾಗ ಮಾತೃಪ್ರಧಾನತೆ

ಪಿತೃಪ್ರಧಾನ ಸ್ಥಿತಿಗೆ ಪಲ್ಲಟವಾದ ಬಗೆಯನ್ನು ಗಮನಿಸಬಹುದಾಗಿದೆ. ಇದಕ್ಕೆ ಪೂರಕವಾಗಿ ಇಂದಿಗೂ ಕೇರಳದಂಥ ಕೆಲವು ಪ್ರದೇಶದ ಕುಟುಂಬಗಳಲ್ಲಿ ಮಾತೃಪ್ರಧಾನತೆ ಇದ್ದು ಆಸ್ತಿ ಒಡೆತನವೂ ಆಕೆಯ ಹಿಡಿತದಲ್ಲೇ ಇರುವುದನ್ನು ನಾವು ನೋಡಬಹುದು.

''ಪಿತೃ ಸಂಸ್ಕೃತಿಯು ಸ್ತ್ರೀ ಪುರುಷರ ನಡುವೆ ಕಲ್ಪಿಸಿರುವ ಸಂಬಂಧಗಳ ಸ್ವರೂಪವು ಮಹಿಳೆಯನ್ನು ಯಾವುದೇ ಉತ್ಪಾದನಾ ಚಟುವಟಿಕೆಯಿಂದ ಪ್ರತ್ಯೇಕಗೊಳಿಸಿಡುವಷ್ಟು ಪ್ರಬಲವಾಗಿದೆ. ವಿವಾಹ, ಕುಟುಂಬ, ಮನೆಗಳೆಂಬ ಚೌಕಟ್ಟಿನಲ್ಲಿ ಒಂದೇ ಸೂರಿನಡಿ ಪುರುಷನ ಆಶ್ರಯದಲ್ಲೇ ಬದುಕಬೇಕಾದ ಮಹಿಳೆಯ ಜೀವನ ಸಂದರ್ಭ ಅತ್ಯಂತ ಸಂಕೀರ್ಣವಾಗಿರುತ್ತದೆ. ಅವಳ ದೈಹಿಕ ದುಡಿಮೆ ಹಾಗೂ ಸಂತಾನೋತ್ಪತ್ತಿಯ ದುಡಿಮೆಗಳೆರಡನ್ನು ಆಕ್ರಮಿಸಿ ಬಿಡುವ ಇಲ್ಲಿನ ಅಸಮಾನತೆ ಕೇವಲ ಭೌತಿಕ ಸಂಗತಿಯಾಗಿರುವುದಿಲ್ಲ. ಅವಳ ಮನಸ್ಸು, ಬುದ್ಧಿಗಳನ್ನು ಈ ಅಸಮಾನತೆ ಆಕ್ರಮಿಸಿ ಆಳುತ್ತದೆ''[3] ಅವಳ ಸಹಜ ಸೂಕ್ಷ್ಮ ಸಂವೇದನೆಗಳನ್ನೇ ಉರುಳಾಗಿ ಬಳಸುವ ಕುತಂತ್ರವನ್ನು ಪುರುಷ ಪ್ರಧಾನ ವ್ಯವಸ್ಥೆಯು ಮಾಡುತ್ತಿದೆ.

'ಜೋಕುಮಾರ ಸ್ವಾಮಿ' ಮತ್ತು 'ಎರ್ಮಾ' ನಾಟಕಗಳಲ್ಲಿ ನಾವು ಪುರುಷ ಕೇಂದ್ರಿತ ಸಮಾಜವನ್ನು ಇದರಿಂದ ಹೆಣ್ಣಿಗಾಗುವ ಶೋಷಣೆಯನ್ನು ನೋಡಬಹುದು. ಇಲ್ಲಿ ಬರುವ ಪುರುಷರು ಅಧಿಕಾರವನ್ನು ತನ್ನ ಕೈಯಲ್ಲಿ ಕೇಂದ್ರೀಕರಿಸಿಕೊಂಡು ಹೆಣ್ಣನ್ನು ಗುಲಾಮರಾಗಿ ಕಾಣುತ್ತಾರೆ.

ಗೌಡ್ತಿ : (ಒಳಗಿನಿಂದ ಬಂದು) ಕೇಳಿದೇನ ?

ಗೌಡ : ನಿಂದೇನ ಈ ಮಂಧ್ಯಾಗ ? ಅಮ್ಯಾಲ ಕೇಳತೀನಂತ ಹೋಗು[4]

ಇದೇ ರೀತಿ ಪುರುಷ ಧೋರಣೆಯನ್ನು ಎರ್ಮಾ ನಾಟಕದಲ್ಲಿ ಯುವಾನ್ ಪಾತ್ರದಿಂದ ನೋಡಬಹುದು. ಹೆಂಡತಿಯನ್ನು ಮನೆಯ ಬಂಧನದಲ್ಲಿರುವಂತೆ ಮಾಡುವುದು ಅಲ್ಲಿಯೂ ಅವಳಿಗೆ ಸ್ವತಂತ್ರ ಸ್ಥಿತಿಯನ್ನು ಕೊಟ್ಟಿಲ್ಲದ ಹಾಗೂ ಅವನ ಕ್ರೌರ್ಯವನ್ನು ಲೋರ್ಕಾ ಚಿತ್ರಿಸಿದ್ದಾನೆ.

ಎರ್ಮಾ : ನಾನು ತವರುಮನೆ ಬಿಟ್ಟಾಗ ನನಗೆ ದುಃಖವೇನಾಗಿಲ್ಲ
ನನ್ನ ಅಮ್ಮನೇ ಅತ್ಲು. ನನ್ನಂತೆ ಖುಷಿಯಿಂದ
ಮದುವೆಯಾದೋಳು
ಮತ್ತೊಬ್ಬಳಿಲ್ಲ. ಆದರೆ ಈಗ ಮಾತ್ರ.......

ಯುವಾನ್ : ಸಾಕು ನಿಲ್ಲಿಸು, ದಿನವಿಡೀ ನಿನ್ನ ಮಾತುಗಳನ್ನು
ಕೇಳುವಷ್ಟು ಪುರುಸೊತ್ತು ನನಗಿಲ್ಲ'೫

ಇಲ್ಲಿ ಯುವಾನ್ ಮತ್ತು ಗೌಡ ಇವರಿಬ್ಬರೂ ಹೆಂಡತಿಯರನ್ನು ನಿಯಂತ್ರಿಸುತ್ತಿದ್ದಾರೆ. ಇವರ ಪ್ರಕಾರ ಹೆಂಡತಿ ಎನಿಸಿ ಕೊಂಡವಳು ಮನೆಯ ಕೆಲಸಗಳನ್ನು ಮಾಡಿಕೊಂಡಿರುವುದಷ್ಟೇ ಹಾಗೂ ಇವಳ ಜೀವಿತಾವಧಿಯನ್ನು ಗಂಡನ ಅಧೀನಕ್ಕೆ ಒಳಪಡಿಸಬೇಕೆಂಬ ಧೋರಣೆಯನ್ನು ಹೊಂದಿದ್ದಾರೆ.

ಗೌಡ : ಒಂದುಕೆಲಸಾ ಮಾಡತಿ

ಗೌಡ್ತಿ : ಏನ ಹೇಳಲ್ಲ

ಗೌಡ : ಬಾಯ್ಮುಚ್ಚಿಕೊಂಡ ಒಳಗ ಹೋಗ್ತಿ ?''೬

ಇಲ್ಲಿ ಬರುವ ಗಂಡಸರು ಒಂದು ರೀತಿಯ ಬೇಜವಾಬ್ದಾರಿ ಹೊಂದಿದವರಾಗಿದ್ದಾರೆ. ಹೆಣ್ಣಿನ ವೈಯಕ್ತಿಕ ಅನಿಸಿಕೆ, ಬಳಲಿಕೆ, ಸಹಜ ಕಾಮನೆ, ಕನಸು, ಸ್ವಾತಂತ್ರ್ಯವನ್ನು ಲೆಕ್ಕಿಸದೇ ತಮ್ಮ ದರ್ಪ, ಅಧಿಕಾರವನ್ನು ಹೆಣ್ಣಿನ ಮೇಲೆ ಹೇರುತ್ತಿರುವ ವ್ಯಕ್ತಿಗಳಾಗಿ ಕಂಡು ಬಂದಿದ್ದಾರೆ. ಹೆಣ್ಣು ತನ್ನೆಲ್ಲಾ ಆಸೆ-ಆಕಾಂಕ್ಷೆಗಳನ್ನು ಬದಿಗೊತ್ತಿ ಸದಾ ಕುಟುಂಬದ ಹಿತಕ್ಕಾಗಿ ಒದ್ದಾಡುವಂತೆ ಮಾಡುವುದು ಇವರ ಮುಖ್ಯ ಕ್ರೌರ್ಯಗಳಲ್ಲಿ ಒಂದಾಗಿದೆ. ಮದುವೆಯೆಂಬ ಚೌಕಟ್ಟಿನಲ್ಲಿ ಈ ಹೆಣ್ಣುಗಳು ದಿನ ದಿನಕ್ಕೂ ಕುಬ್ಜರಾಗಿ ದನಿಯಿಲ್ಲದವರಾಗುತ್ತಾರೆ.

ಎರ್ಮಾ : (ದುಃಖದಿಂದ) ನಾನು ಎಲ್ಲೆಲ್ಲಿ ಗುಲಾಬಿಯ ಅತ್ತರಿಗಾಗಿ
ಅರಸಿದೆನೋ, ಅಲ್ಲೆಲ್ಲಾ ನನಗೆ ಸಿಕ್ಕಿದ್ದು ಕೇವಲ ಗೋಡೆ
ತಣ್ಣನೆಯ ಕಲ್ಲಿನ ಗೋಡೆ.. ನನ್ನ ತಲೆ ಚಚ್ಚಿಕೊಳ್ಳೋಕೆ
ಅಯ್ಯೋ..!

ಯುವಾನ್ : ಸಾಕು ಬಾಯಿಮುಚ್ಚು, ನಡಿ ಹೋಗೋಣ.[೭]

ಹೆಣ್ಣಿನ ನೋವುಗಳನ್ನು ಅವರ ಆಸೆ ಆಕಾಂಕ್ಷೆಗಳನ್ನು ಕೇಳುವುದಕ್ಕೂ ತಮಗೆ ಬಿಡುವಿಲ್ಲ ಎಂಬ ದರ್ಪದಿಂದ ವರ್ತಿಸುತ್ತಿದ್ದಾರೆ. ಮದುವೆ ಸಮುಯದಲ್ಲಿ ಹೆಣ್ಣಿನ ತಂದೆ-ತಾಯಿಗಳು ತಮ್ಮ ಮಗಳ ಸಂಪೂರ್ಣ ಜವಾಬ್ದಾರಿ ಗಂಡಂದಿರಿಗೆ ವಹಿಸಿರುತ್ತಾರೆ. ಆದರೆ ಇವರುಗಳು ಆ ಜವಾಬ್ದಾರಿಯನ್ನು ಮರೆತು ಹೆಣ್ಣಿನ ಕನಸನ್ನು ತಮ್ಮ ಸುಖಕ್ಕೋಸ್ಕರ ಮಾರಿ ಕೊಳ್ಳುತ್ತಾರೆ. ತಮ್ಮ ಹೆಂಡತಿಯರನ್ನು ಸಂಪೂರ್ಣವಾಗಿ ಹತೋಟಿಯಲ್ಲಿಡಲು ಬಯಸುವ ಪಾತ್ರಗಳಾಗಿ ಕಾಣುತ್ತಾರೆ. ತಮ್ಮ ಮನೆಯಲ್ಲಿಯೇ ಸ್ವತಂತ್ರ ಕಳೆದುಕೊಂಡ ವ್ಯಕ್ತಿಗಳಾಗಿ ಗೌಡ್ತಿ ಮತ್ತು ಎರ್ಮಾ ಕಂಡು ಬರುತ್ತಾರೆ.

ಗೌಡ್ತಿ : ಇಂದ ರಾತ್ರೀನಾದರೂ ಮನೀಗಿ ಬರ್ತೀಯಲ್ಲ ?

ಗೌಡ : ಎಲೀ ಇವಳ ಏನ ಕರಳ ಹರದ ಬೀಳವರ್ಹಾಂಗ ಕಾಳಜಿ

ಮಾಡತಾಳೊ ! ಒಂದು ಬೀಡಿ ಸೇದೋದರೊಳಗ ನಿಂದೆಲ್ಲಾ

ಮುಗೀಬೇಕ ನೋಡ : ಕೇಳತೇನ.[೮]

ಇದೇ ರೀತಿಮನೋಧೋರಣೆಯನ್ನು ಯುವಾನ್ ಹೊಂದಿದ್ದಾನೆ. ತನ್ನ ಹೆಂಡತಿಯ ಅಭಿವ್ಯಕ್ತಿ ಸ್ವತಂತ್ರವನ್ನೂ ಸಂಪೂರ್ಣವಾಗಿ ಕಿತ್ತುಕೊಂಡಿದ್ದಾನೆ.

ಎರ್ಮಾ : ನಮ್ಮ ಮದುವೆಯಾಗಿ ಎರಡು ವರ್ಷಗಳಾದವು ನೀನು ಬರ್ತಾ ಬರ್ತಾ ಮೂಳೆ ಚಕ್ಕ ಆಗ್ತೀದಿಯಾ

ಯುವಾನ್: ಮುಗೀತಾ ನಿಂದು ?[೯]

ಸಮಾಜದಲ್ಲಿ ಹೆಣ್ಣು ಹುಟ್ಟುವುದೇ ಒಂದು ಅಪರಾಧವಾಗಿ ಬಿಟ್ಟಿದೆ. ಹುಟ್ಟಿನಿಂದ ಹಿಡಿದು ಸಾಯುವವರೆಗೂ ಹೆಣ್ಣು ಖರ್ಚಿನ ಗಣಿ ಎಂದೇ ತಂದೆ-ತಾಯಿಗಳು ಯೋಚಿಸುತ್ತಾರೆ. ಇದರಿಂದಾಗಿ ಅವಳಿಗೆ ಒಂದು ಮದುವೆ ಮಾಡಿ ಗಂಡನ ಮನೆಗೆ ಕಳುಹಿಸಿ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳಬೇಕೆಂದು ಬಯಸುತ್ತಾರೆ. ಅವಳ ಆಸೆ ಆಕಾಂಕ್ಷೆಗಳಿಗೆ ಯಾವುದೇ ಬೆಲೆ ಕೊಡದೆ ಒಬ್ಬ ಹುಡುಗ ಸಿಕ್ಕಿದರೆ ಸಾಕು ಅವರು ಯೋಚಿಸದೆ ತನ್ನ ಮಗಳನ್ನು ಯಾವರೀತಿ ನೋಡಿಕೊಳ್ಳುತ್ತಾನೆಂದು ತಿಳಿದುಕೊಳ್ಳದೆ ಮದುವೆ ಮಾಡುವುದು ರೂಢಿಯಾಗಿದೆ. ಮದುವೆಯಾದ ನಂತರ ಹೆಣ್ಣು ತನ್ನ ನೋವು

ದುಃಖಗಳನ್ನು ಸಮಾಜ ಮತ್ತು ತಂದೆ ತಾಯಿಯ ಮೇಲಿನ ಆಕ್ರೋಶವನ್ನು ವ್ಯಕ್ತಪಡಿಸುತ್ತಾರೆ. ಇದೇ ರೀತಿಯ ಆಕ್ರೋಶವನ್ನು ಎರ್ಮಾ ಮತ್ತು ಹುಡುಗಿ –೨ ಇಬ್ಬರೂ ವ್ಯಕ್ತಪಡಿಸುತ್ತಾರೆ.

ಎರ್ಮಾ : ನನ್ನಗಂಡ, ಆ ಕಥೇನೇ ಬೇರೆ. ನನ್ನ ಅಪ್ಪ ಹುಡುಕಿದ ಅವನನ್ನು ನಾನು ಸುಮ್ಮನೆ ಒಪ್ಪಿಕೊಂಡೆ. ಅಷ್ಟೆ. [೧೦]

ಹುಡುಗಿ: ಮದುವೆ ಆಗೋದು ? ಎಲ್ರೂ ಆಗಲ್ವಾ ?ನನ್ನ ತಂದೆ ತಾಯಿಗಳಿಗೆ ನಾನು ಮದುವೆಯಾಗಿ ಆಚೆ ಹೋಗೋದೇ ಬೇಕಾಗಿತ್ತು.[೧೧]

ಈ ಸಮಾಜವು ''ಹೆಣ್ಣು ಗಂಡಿನ ಹಿತಾಸಕ್ತಿಗನುಗುಣವಾಗಿ ಹಲವಾರು ಪಾತ್ರಗಳನ್ನು, ಮುಖವಾಡಗಳನ್ನು ಹಾಕಬೇಕು ಎಂಬುದನ್ನು ನಿರ್ದೇಶಿಸುತ್ತಲೇ ಸಾಂಸ್ಕೃತಿಕ ಮತ್ತು ಸಾಮಾಜಿಕ ಮೌಲ್ಯಗಳನ್ನಾಗಿಸಿದ್ದಾರೆ. ಹೆಣ್ಣಿಗೆ ಆರು ಗುಣಗಳನ್ನು ಆರೋಪ ಮಾಡುವ ಪುರುಷ ಪ್ರಧಾನ ವ್ಯವಸ್ಥೆ ತನ್ನಲ್ಲಿ ಆ ಗುಣಗಳನ್ನು ತಪ್ಪಿಯೂ ಹುಡುಕಿಲ್ಲ.''[೧೨] ಸ್ತ್ರೀಯರಿಗೆ ಸ್ವಂತ ಬದುಕು ಬಾಳು ಇಲ್ಲದಂತೆ ಮಾಡುವುದು, ಅವರಲ್ಲಿರುವ ಸಹಜವಾದ ಆತ್ಮವಿಶ್ವಾಸ ದಿಟ್ಟತನಗಳನ್ನು ಹೆಜ್ಜೆ ಹೆಜ್ಜೆಗೂ ಕೊಲ್ಲುತ್ತಿರುವುದೂ ಕೂಡ ನಮ್ಮ ವ್ಯವಸ್ಥೆಯ ದೌರ್ಬಲ್ಯವಾಗಿದೆ.

ಹೆಣ್ಣಿಗೆ ಯಾವುದೇ ವಿಷಯದಲ್ಲಿ ಸ್ವತಃ ನಿರ್ಧಾರವನ್ನು ತೆಗೆದುಕೊಳ್ಳುವಂತೆ ನಿಯಂತ್ರಿಸುವ ವ್ಯಕ್ತಿ ಪ್ರತಿನಿಧಿಗಳಾಗಿ ಯುವಾನ್ ಮತ್ತು ಗೌಡ ಕಂಡು ಬರುತ್ತಾರೆ. ಹೆಣ್ಣಿಗೆ ಬೇಕಾಗಿರುವುದು ಊಟ, ಬಟ್ಟೆ ಮತ್ತು ಮನೆಯೇ ಹೊರತು ಅದರ ಆಚೆಗೆ ಚಿಂತಿಸುವ ಆಲೋಚಿಸುವ ಹಕ್ಕುಗಳಿಲ್ಲದಂತೆ ಮಾಡಿರುವ ಪುರುಷ ಪ್ರಧಾನ ವ್ಯವಸ್ಥೆಯನ್ನು ನಾವು ಈ ನಾಟಕಗಳೆರಡರಲ್ಲೂ ನೋಡುತ್ತೇವೆ. ವಿವಾಹವೆಂಬುದು ಮೇಲು ನೋಟಕ್ಕೆ ಮಹಿಳೆಗೆ ಭದ್ರತೆಯನ್ನು ಒದಗಿಸುತ್ತದೆ ಎಂಬಂತೆ ತೋರಿದರೂ ತನ್ನ ಮನೆಯಲ್ಲಿ ತಾನೇ ಪರಕೀಯಳಾಗುವ ಸ್ಥಿತಿಯನ್ನು ತಂದೊಡ್ಡುತ್ತದೆ ಎಂಬುದನ್ನು ಈ ನಾಟಕಗಳಲ್ಲಿ ಲೋರ್ಕಾ ಮತ್ತು ಕಂಬಾರರು ತೋರಿಸಿದ್ದಾರೆ.

ಗೌಡ್ತಿ : ಗೊತ್ತೈತಿ ಬಿಡ ಮದಿವ್ಯಾಗಿ ಹತ್ತ ವರ್ಷಾಯ್ತು, ಏನಾದರೂ ನಡಿಸಿಕೊಡ್ತಂತ ಕೇಳೇನೇನ ಹೇಳ ?

ಗೌಡ ; ನಿನಗೇನ ಕಡಿಮಿ ಆಗೇತಿ. ಅದನಾದರೂ ಹೇಳ .[೧೩]

ಇದೇ ರೀತಿ ಧೋರಣೆಯನ್ನು ಎರ್ಮಾ ನಾಟಕದಲ್ಲಿ ಯುವಾನ್ ಹೊಂದಿದ್ದಾನೆ. ಹೆಣ್ಣಿನ ಮನಸ್ಸಿನ ತಳಮಳವನ್ನು ಗ್ರಹಿಸದ ಸ್ಥಿತಿಯಲ್ಲಿ ಇವನಿದ್ದಾನೆ.

ಯುವಾನ್ : ನಿನಗೆ ಏನಾದ್ರೂ, ಬೇಕಾದ್ರೆ ನನಗೆ ಹೇಳಿದ್ರೆ ಸಾಕು, ನಾನದನ್ನು ತಂದು ಕೊಡ್ತೀನಿ ಆದರೆ ನೀನು ಮನೆಯಿಂದ ಆಚೆ ಸುತ್ತೋದು ನನಗೆ ಹಿಡಿಸೋಲ್ಲ ಅಂತ ನಿನಗೂ ಗೊತ್ತು[೧೪]

ಯುವಾನ್ ಮತ್ತು ಎರ್ಮಾ ರ ಸಂಬಂಧವು ಖಾಸಗಿತನ ಮತ್ತು ಸಾರ್ವಜನಿಕತೆಗಳ ದ್ವಂದ್ವವಾಗಿದೆ. ಯುವಾನ್ ಸಾರ್ವಜನಿಕತೆಗೆ ಹೆಚ್ಚು ಬೆಲೆ ಕೊಡುತ್ತಿದ್ದಾನೆ. ಎರ್ಮಾ ಖಾಸಗೀತನಕ್ಕೆ ಹೆಚ್ಚು ಬೆಲೆ ಕೊಡುತ್ತಾಳೆ. ಯುವಾನ್ ಸಮಾಜ ಹೇರಿರುವ ಕಟ್ಟು ಪಾಡುಗಳ ಪ್ರತಿನಿಧಿಯಾಗಿ ವರ್ತಿಸುತ್ತಾನೆ.

ಯುವಾನ್ : (ಕೋಪದಿಂದ) ನೀನು ಏನು ಹೇಳ್ಬೇಕು ಅಂತ ಇದೀಯಾ? ಏನಿದರ ಅರ್ಥ ಯುವಾನ್ ?

ಯುವಾನ್ : ನಾನು ನಿನ್ನ ಬಗ್ಗೆ ಹೇಳ್ತಿಲ್ಲಾ ಬೇರೆಯವರ ಬಗ್ಗೆ[೧೫]

ನಮ್ಮ ಸಮಾಜದಲ್ಲಿ ಒಬ್ಬ ವ್ಯಕ್ತಿಯು ತನಗಿಂತ ಕೆಳಗಿನ ಸಾಮಾಜಿಕ ಸ್ತರದ ಜಾತಿಯ ವ್ಯಕ್ತಿಯನ್ನು ಮದುವೆಯಾಗಲು ನಿಷೇದವಿದೆ. ಮೇಲುಜಾತಿಯ ಗಂಡಸು ಕೆಳಜಾತಿಯ ಹೆಣ್ಣಿನೊಡನೆ ಲೈಂಗಿಕ ಸಂಪರ್ಕ ಪಡೆಯುವುದನ್ನು ನಿಷಿದ್ಧ ಎಂದು ಪರಿಗಣಿಸಿಲ್ಲ. ಆದರೆ ಕೆಳಜಾತಿಯ ಗಂಡೊಬ್ಬನು ಮೇಲುಜಾತಿಯ ಹೆಣ್ಣೊಬ್ಬಳೊಡನೆ ಲೈಂಗಿಕ ಸಂಪರ್ಕ ಪಡೆಯುವುದನ್ನು ಈ ಸಮಾಜ ಸಹಿಸುವುದಿಲ್ಲ.

ಒಂದು ಕಡೆ ಎರ್ಮಾ ನಾಟಕದಲ್ಲಿ ಪರಪುರುಷನನ್ನು ನೋಡುವುದು ತಪ್ಪು ಎನ್ನುವ ಸಮಾಜ ಗೌಡನ ಪಾತ್ರಕ್ಕೆ, ಯಾವ್ದುದೇ ಪ್ರತಿಕ್ರಿಯೆ ವ್ಯಕ್ತಪಡಿಸದೆ ಇರುವುದು ನೋಡಿದರೆ ಪುರುಷ ಹಾಕಿರುವ ಸಂಕಥನಗಳು ಸಮಾಜದಲ್ಲಿ ಎಷ್ಟೊಂದು ಪ್ರಬಲವಾಗಿ ಬೇರು ಬಿಟ್ಟಿವೆ ಎಂಬುದು ತಿಳಿಯುತ್ತದೆ.

ಗೌಡ : ಭರ್ತಿ ವಯಸ್ಸಿಗೆ ಬಂದಾಳಲ್ಲೋ, ನೋಡು ಎಷ್ಟು
ತುಳುಕ್ಯಾಡತಾಳೋ ? ಮದುವ್ಯಾಗಿಲ್ಲೇನ ಇನ್ನೂ ? [೧೬]

ಹೆಣ್ಣು ಮನೆಯ ಹೊರಗೆ ಬಂದು ಪರಪುರುಷನನ್ನು ನೋಡುವುದು, ಮಾತನಾಡುವುದು ಸರಿಯಲ್ಲ ಎಂಬ ನಿಯಂತ್ರಣ ಮಾಡುವ ಗಂಡಂದಿರು ತಮ್ಮ ಸಮರ್ಥನೆಗಾಗಿ ಸಮಾಜದ ವಿಕೃತ ಮುಖವಾಡಗಳನ್ನು ಬಳಸಿಕೊಂಡು, ಹೆಂಡತಿಯನ್ನು ಮನೆಯ ಬಂಧನದಲ್ಲಿಡಲು ಪ್ರಯತ್ನಿಸುತ್ತಾರೆ. ಇದು ಯುವಾನ್ ವ್ಯಕ್ತಿತ್ವದಲ್ಲೂ ಕಂಡು ಬರುತ್ತದೆ. ಇವನು ತನ್ನ ಹೆಂಡತಿಯನ್ನು ನಿಯಂತ್ರಣದಲ್ಲಿಟ್ಟುಕೊಳ್ಳಬೇಕೆಂದು ಬಯಸಿ ತನ್ನ ತಂಗಿಯರನ್ನು ಅವಳ ಮೇಲೆ ಕಣ್ಣಿಡಲು ನೇಮಿಸುತ್ತಾನೆ. ಇವನ ಕ್ರೌರ್ಯ ವ್ಯಕ್ತಿತ್ವ ಇದರಲ್ಲೇ ಬಿಂಬಿತವಾಗುತ್ತದೆ.

ಪುರುಷರಿಗೆ ಅನ್ವಯಿಸಿದಂತೆ ವಿವಾಹ ಬಾಹಿರ ಲೈಂಗಿಕ ಸಂಬಂಧಗಳು ಅನೈತಿಕವೆನಿಸುವುದಿಲ್ಲ. ಆ ಸಂಬಂಧಗಳಲ್ಲಿ ವೇಶ್ಯೆಯಾಗಿಯೇ ಅಲ್ಲದೆಯೋ ಭಾಗವಹಿಸುವ ಹೆಂಗಸು ಮಾತ್ರವೇ ಅಪರಾಧಿಯೆನಿಸುವುದು ತನ್ನ ವಿವಾಹ ಬಾಹಿರ ಸಂಬಂಧಗಳನ್ನು ಪುರುಷನು ಮುಚ್ಚು ಮರೆಯಾಗೇನೂ ಇಡಬೇಕಾಗಿಲ್ಲ. ಹೆಮ್ಮೆಯಿಂದಲೇ ಪ್ರದರ್ಶಿಸುತ್ತಾನೆ. ಇನ್ನು ಮುಂದೆ ಹೋಗಿ ಈ ಮೊದಲೇ ಮನೆಯಲ್ಲಿ ವಿವಾಹಿತ ಪತ್ನಿ ಇದ್ದರೂ ಮಕ್ಕಳಾಗದ ನೆಪದಲ್ಲೋ ಇನ್ನಾವುದೋ ನೆಪದಲ್ಲೋ ಇನ್ನೊಂದು ಹೆಣ್ಣನ್ನು ಮದುವೆಯಾಗಿ ಮನೆಗೆ ತಂದಿರಿಸಿ ಕೊಳ್ಳುತ್ತಾನೆ. ಆದರೆ ಇದೇ ಕೆಲಸವನ್ನು ಹೆಣ್ಣೊಬ್ಬಳು ಮಾಡಿದರೆ ಸಮಾಜದಿಂದ ಉಚ್ಚಾಟಿತಳಾಗುತ್ತಾಳೆ.

ಕಂಬಾರರು ಜೋಕುಮಾರ ಸ್ವಾಮಿ ನಾಟಕದಲ್ಲಿ ಪುರುಷ ಸಮಾಜದ ಕ್ರೌರ್ಯವನ್ನು ಪ್ರಶ್ನಿಸಿದ್ದಾರೆ. ವೇಶ್ಯೆಯರಿಗೆ ಮೀಸಲು ಮುರಿಯುತ್ತೇನೆ ಎನ್ನುವ ಗೌಡ

ಸಿಕ್ಕ ಸಿಕ್ಕ ಸುಂದರ ಹೆಣ್ಣುಗಳನ್ನು ಬಯಸಿದ್ದಾನೆ. ಈ ಸಮಾಜ ಇದಕ್ಕೆ ಯಾವುದೇ ವಿರೋಧವನ್ನು ವ್ಯಕ್ತಪಡಿಸದೆ ಇರಲು ಮುಖ್ಯ ಕಾರಣ ಅವನ ಅಧಿಕಾರವೇ ಆಗಿದೆ.

ಗೌಡ : ಹುಚ್ಚಿ, ಎಷ್ಟಂತ ಚಾಷ್ಟಿ ಮಾಡತಿ ? ನಿನಗ ಮೊದಲ
ಗೊತ್ತೈತಿ ನಾ ಮನಸ್ಸ ಇಟ್ಟಿದ್ದ ಯಾವುದೂ ಬಿಟ್ಟಿಲ್ಲಂತ
ಮತ್ತ ಓಡ್ಯಾಡಸ್ತಿ ಕಾಣಬಾರದ ? ನಿನ್ನ ಸಲುವಾಗಿ
ಮನಿಮಾರ ಬಿಟ್ಟ ಹೊಲಾ ಬಿಟ್ಟ ನೆಲಾಬಿಟ್ಟ
ಲಜ್ಜಿಗೀಡ್ಯಾಗಿ ತಿರಗತೇನು [೧೭]

ಗೌಡನು ಹೆಣ್ಣುಗಂಡಿನ ಗಳಿಕೆ, ಇವಳು ತನ್ನ ಆಸ್ತಿಬೇಕಾದರೆ ಇಟ್ಟುಕೊಳ್ಳಬಹುದು, ಬೇಡವಾದರೆ ಮಾರಬಹುದೆಂಬ ಧೋರಣೆಯಿಂದ ಕೂಡಿದ್ದಾನೆ.

ಗಂಡ : ಮೂರು ರೂಪಾಯಿಗಿ ಈಕೀನ್ನ ಮಾರತೀನ
ತಗೊಳ್ತಿ ?[೧೮]

ಎರ್ಮಾ ನಾಟಕದಲ್ಲಿ ಯುವಾನ್‌ನು ಎರ್ಮಾಳ ಮೇಲೆ ವಿಪರೀತ ಅನುಮಾನ ಪಡುತ್ತಾನೆ. ಅವಳು ಹೊರಗೆ ಹೋಗಿ ಬೇರೆಯೊಬ್ಬನ ಜೊತೆ ಸಂಬಂಧ ಬೆಳೆಸಿಕೊಂಡು ಬಿಡಬಹುದು. ಇದರಿಂದ ನನ್ನ ಮಾನ, ಮರ್ಯಾದೆ ಮನೆತನದ ಗೌರವ ಹಾಳಾಗಿ ಹೋಗುತ್ತದೆ ಎಂದು ಕಲ್ಪನೆಯಲ್ಲಿ ಮುಳುಗಿ ಅವಳನ್ನು ನಾಲ್ಕು ಗೋಡೆಗಳ ಮಧ್ಯೆ ಬಂದಿಯಾಗಿಡಲು ಪ್ರಯತ್ನಿಸುತ್ತಾನೆ. ಇವನ ಪ್ರಕಾರ ಹೆಣ್ಣು ಪರಪುರುಷರೊಡನೆ ಮಾತನಾಡುವುದು ತಪ್ಪು ಎಂಬ ಗ್ರಹಿಕೆಯನ್ನು ಹೊಂದಿದ್ದಾನೆ. ಇಲ್ಲಿ ಎರ್ಮಾಳಿಗೆ ಸ್ವತಂತ್ರವಿಲ್ಲದ ಸ್ಥಿತಿ ನೋಡಬಹುದು. ಇವಳ ಅಸಮಾಧಾನ ನಿರಂತರವಾಗಿ ಬೆಳೆಯುತ್ತದೆ.

ಯುವಾನ್: ನೀನು ಅತಿಯಾಗಿ ಆಚೆ ಹೋಗ್ತಿದೀಯ ಇದನ್ನ ನಾನು
ನಿನಗೆ ಅನೇಕ ಸಲ ಹೇಳಿದ್ದೀನಿ. ಕುರಿಗಳು ರೊಪ್ಪದಲ್ಲಿ
ಇರಬೇಕು ಹೆಂಗಸರು ಮನೇಲಿ ಇರಬೇಕು.[೧೯]

ಅವನು ಕಾಯುತ್ತಿರುವ ಕುರಿಗೂ, ಅವನು ಕಾಯಬೇಕಾದ ಹೆಣ್ಣಿಗೂ ವ್ಯತ್ಯಾಸವಿಲ್ಲದ ರೀತಿ ವರ್ಣಿಸುತ್ತಾನೆ. ಹೆಣ್ಣನ್ನು ಒಂದು ಪ್ರಾಣಿಯ ರೀತಿ ನೋಡುತ್ತಾನೆ.

ಮದುವೆಯಾದ ಹೆಂಗಸು ಒಪ್ಪಿತ ಸಮಾಜದ ಕಟ್ಟಳೆಯ ರೀತಿಯಲ್ಲೇ ನಡೆಯಬೇಕೆಂಬ ಮನೋಭಾವವನ್ನು ಯುವಾನ್ ಹೊಂದಿದ್ದಾನೆ. ಪರಪುರುಷನನ್ನು ನೋಡುವುದು ಮಾತನಾಡುವುದು ತಪ್ಪು ಎಂಬ ಧೋರಣೆಯನ್ನು ಹೊಂದಿದ್ದಾನೆ. ಇವನಲ್ಲಿ ಲೋಪವಿಟ್ಟುಕೊಂಡು ತನ್ನ ಹೆಂಡತಿಯಲ್ಲಿನ ಲೋಪ ಹುಡುಕುತ್ತಾನೆ. ಇಲ್ಲಿ ಲೋರ್ಕಾ ಹೆಣ್ಣಿನ ಸೀಮಿತತೆಯನ್ನು ವ್ಯಕ್ತಪಡಿಸಿದ್ದಾನೆ.

> ಯುವಾನ್: ನೀನು ಸಾಧಾರಣ ಹೆಣ್ಣಲ್ಲ ನಿನಗೆ ಬೇಕಿರೋದು ನೀನು ಹಾಳಾಗೋದು ಮತ್ತು ನಿನ್ನ ಜೊತೆ ನನ್ನನ್ನು ದರಗುಟ್ಟಿ ಎಳೆದು ಪಾತಾಳಕ್ಕೆ ಎಸೆಯೋದು .[೨೦]

ಎರ್ಮಾ ಯುವಾನನಂತೆ ನಪುಂಸಕಳಲ್ಲ. ಆದ್ದರಿಂದ ಅವಳಿಗೆ ಕಾಮದ ಸುಖ ಬೇಕಾಗಿದೆ. ಅದನ್ನು ನೀಡಲಾಗದ ಯುವಾನ್ ಅವಳಿಗೆ ನಾಚಿಕೆ ಅಸಹ್ಯ ಎನಿಸುವಂತ ಮಾತುಗಳಿಂದ ಅವಳನ್ನು ನಿಯಂತ್ರಿಸಲು ಪ್ರಯತ್ನಿಸುವಂತೆ ಕಂಡು ಬರುತ್ತಾನೆ. ಸಹಜ ಸ್ಥಿತಿಯ ಎರ್ಮಾಳಿಗೆ ತಿರಸ್ಕಾರದ ಅಪಮಾನದ ಮಾತುಗಳಿಂದ ಹಿಂಸೆಯನ್ನು ನೀಡುತ್ತಾನೆ. ಎರ್ಮಾ ತಾನು ಬೇರೆಯವರ ಜೊತೆ ಸಂಬಂಧ ಬೆಳೆಸಿಕೊಳ್ಳಲು ಸಮಾಜ ಮತ್ತು ಯುವಾನ್ ಇಬ್ಬರೂ ಅಡ್ಡಿಯಾಗುತ್ತಾರೆ.

ಕಾಮದ ಅಭಿವ್ಯಕ್ತಿಗೆ ವಾಸ್ತವ ಬದುಕಿನಲ್ಲಾಗಲೀ , ಭಾವಜಗತ್ತಿನಲ್ಲಾಗಲೀ ಅವಕಾಶಗಳು ನಿರ್ಬಂಧಿತವಾಗುತ್ತದೆ ಎಂಬುದೇ ಹೆಣ್ಣಿನ ಬದುಕಿನ ಅನುಭವ, ಅವಳ ಬಹುತೇಕ ದುಃಖಗಳು ಈ ನೆಲೆಯವೇ ಆಗಿವೆ. ವಿವಾಹದಲ್ಲಾಗಲೀ ಅದರ ಹೊರತಾಗಲಿ ಹೆಣ್ಣು ತನ್ನ ಅಗತ್ಯ ಕಾಮವನ್ನು ಅನುಭವಿಸುವುದಿರಲಿ, ಕಲ್ಪಿಸುವುದು ಕೂಡ ಸಾಧ್ಯವಾಗುವುದಿಲ್ಲ. ಶೀಲಸಂಹಿತೆಯ ಗೆರೆಗಳು ಹೆಣ್ಣಿನ ಪಾಲಿಗೆ ಕಟ್ಟುನಿಟ್ಟಾಗಿವೆ. ಹೆಣ್ಣಿನ ಕಾಮವು ಎಂದೂ ಅವಳ ಸ್ವಂತದ್ದಲ್ಲ. ಏನಿದ್ದರೂ ಗಂಡಿನ ಅನುಭೋಗಕ್ಕೆ ಬಳಕೆಗೊಳ್ಳುವಂಥದ್ದು. ಈ ನಿಷ್ಠುರ ಸಾಮಾಜಿಕ ನಿಯಮವನ್ನು ಪ್ರಶ್ನಿಸುವ ಒಂದು ಸಣ್ಣ ಅವಕಾಶವೂ ಹೆಣ್ಣಿಗೆ ದೊರೆಯುವುದಿಲ್ಲ ಎಂಬುದನ್ನು ಈ ನಾಟಕಗಳಲ್ಲಿ ನೋಡಬಹುದು.

## ಅಡಿಟಿಪ್ಪಣಿಗಳು

೧. ಸ್ತ್ರೀವಾದಿ ಸಾಹಿತ್ಯ ವಿಮರ್ಶೆ : ತೇಜಸ್ವಿನಿ ನಿರಂಜನ
ಸೀಮಂತಿನಿ ನಿರಂಜನ. ಪುಟ- ೨೪.
ಇಲ್ಲಿ ಉಲ್ಲೇಖಿತ

೨. ದ ಸೆಕೆಂಡ್ ಸೆಕ್ಸ್ : ಸಿಮೊನ್ ದ ಬೋವಾ, ಪುಟ-೮೧೦

೩. ಸ್ತ್ರೀವಾದ : ಎಚ್.ಎಸ್. ಶ್ರೀಮತಿ. ಪುಟ- ೩೬

೪. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ. ಪುಟ-೧೩

೫. ಎರ್ಮಾ ಲೋರ್ಕಾ ನಾಟಕ : ಎಸ್.ಗಂಗಾಧರಯ್ಯ. ಪುಟ- ೩

೬. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ. ಪುಟ- ೨೫

೭. ಲೋರ್ಕಾ ನಾಟಕ ಎರ್ಮಾ : ಎಸ್_ಗಂಗಾಧರಯ್ಯ. ಪುಟ- ೫೫

೮. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ. ಪುಟ- ೨೩

೯. ಲೋರ್ಕಾ ನಾಟಕ ಎರ್ಮಾ : ಎಸ್.ಗಂಗಾಧರಯ್ಯ. ಪುಟ- ೭

೧೦. ಲೋರ್ಕಾ ನಾಟಕ ಎರ್ಮಾ : ಎಸ್ ಗಂಗಾಧರಯ್ಯ. ಪುಟ- ೧೫

೧೧. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ. ಪುಟ- ೧೯

೧೨. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ : ವಿವಿಧ ಲೇಖಕರು. ಪುಟ- ೧೭೭

೧೩. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ. ಪುಟ- ೨೪

೧೪ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ. ಪುಟ- ೪

೧೫ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ. ಪುಟ- ೨೩

೧೬ ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ.ಪುಟ- ೧೮

೧೭ ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ. ಪುಟ- ೬೨

೧೮ ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ. ಪುಟ- ೨೧

೧೯ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ. ಪುಟ- ೩೫

೨೦ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ. ಪುಟ- ೩೮

## ಅಧ್ಯಾಯ - ೩

## ಸ್ತ್ರೀ ಪ್ರತಿಭಟನೆಯ ಸ್ವರೂಪ

ಪುರುಷನು ಧರ್ಮ, ವರ್ಗ, ಜಾತಿಯ ಕಾರಣಕ್ಕಾಗಿ ಶೋಷಿತನಾಗಿದ್ದರೆ ಹೆಣ್ಣು ಈ ಮೂರು ಒಳಗೊಂಡಂತೆ ಪುರುಷರಿಂದಲೂ ದಬ್ಬಾಳಿಕೆಗೆ ಒಳಗಾಗಿದ್ದಾಳೆ.ಹೆಣ್ಣಿನ ದುಃಖ ಶತಶತಮಾನಗಳಷ್ಟು ಹಳೆಯದೇ ಆದರೆ ತನ್ನ ದುಃಖವನ್ನು ತೋಡಿಕೊಳ್ಳುವ ಅವಕಾಶ ಕೂಡ ಶತಶತಮಾನಗಳ ಕಾಲ ಅವಳಿಗೆ ಲಭ್ಯವಾಗದೇ ಹೋಯಿತು. ದೀರ್ಘಕಾಲದ ನೋವು ತನಗೊಂದು ಸ್ವಂತ ಅಸ್ತಿತ್ವವಿದ್ದಿತು ಎಂಬುದನ್ನೇ ವಿಸ್ಮೃತಿಗೆ ತಳ್ಳಿ ಬಿಟ್ಟಿತು. ಹಾಗಾಗಿ ತನ್ನ ಈ ದುಸ್ಥಿತಿಗೆ ಕಾರಣ ತಾನಿರುವ ವಾತಾವರಣದಲ್ಲಿದೆ ಎಂದು ಗ್ರಹಿಸುವ ಶಕ್ತಿಯೇ ಕುಂದಿ ಹೋಗಿ ತನ್ನ ಹೆಣ್ಣು ಜನ್ಮವನ್ನೇ ನಿಂದಿಸಿಕೊಂಡು ಮೌನಿಯಾಗಿದ್ದಳು. ಆದರೆ ಪುರುಷ ಪ್ರಧಾನ ವ್ಯವಸ್ಥೆಯು ಸ್ತ್ರೀಯರ ಮೇಲೆ ನಡೆಸುತ್ತಿದ್ದ ಶೋಷಣೆಯ ಅತಿರೇಕಗಳು ಹೆಚ್ಚಾದಾಗ ಸ್ತ್ರೀಪ್ರತಿಭಟಿಸಲು ಮುಂದಾದಳು.

ನಮ್ಮ ಕನ್ನಡಸಾಹಿತ್ಯವನ್ನು ನೋಡಿದಾಗ ೧೨ನೇ ಶತಮಾನದಲ್ಲಿ ವಚನಕಾರ್ತಿಯರು ಸ್ವಾತಂತ್ರ್ಯದ ಪ್ರಶ್ನೆಯನ್ನು ಎತ್ತಿ ಪ್ರತಿಭಟಿಸಿದರು. ಸಿದ್ಧ ಮಾದರಿಗಳನ್ನು ಒಡೆದು ಒಂದು ಚಳುವಳಿಗೆ ಮುಂದಾದರು. ಇದರಿಂದಾಗಿ ಇತಿಹಾಸದ ಮುಖ್ಯ ನೆಲೆಯಲ್ಲಿ ಇದ್ದೂ ಇಲ್ಲದಂತಿದ್ದ ಸ್ತ್ರೀಯರ ಬಗ್ಗೆ ಗೌರವಾದರಗಳು ಮೂಡಲು ಕಾರಣವಾಯಿತು. ಹೆಣ್ಣಿನ ಹೆಣ್ತನ ಅಥವಾ ಹೆಣ್ಣು ಶರೀರ ಅವಳ ಸಾಧನೆಗೆ ತಡೆಯಾಗದ ಬೇಕಿಲ್ಲ ಎಂಬುದನ್ನು ಅಕ್ಕನಂಥ ಶರಣೆಯರು ಆಗಿಸಿ ತೋರಿಸಿದರು. 'ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೆ' ಎಂದು ಅಕ್ಕನಂಥವರು ಸಾಂಪ್ರದಾಯಿಕವಾದ ಗೃಹಿಣಿ ಪಾತ್ರವನ್ನು ಬದಿಗಿರಿಸಿ ತಮ್ಮ ಸಾಧನೆಯಲ್ಲಿ ತೊಡಗಿದರು. ಹೆಣ್ಣಿನ ಸ್ವಾತಂತ್ರ್ಯದ ಕಲ್ಪನೆಯನ್ನು ಈ ಚಳುವಳಿಯು ಪ್ರತಿಪಾದಿಸಿತು.

ಜಗತ್ತಿನ ಯಾವುದೇ ಕೃತಿಗಳನ್ನು ಗಮನಿಸಿದರೆ ಅದರಲ್ಲಿ ನಾವು ಹೆಣ್ಣಿನ ಭಾಷೆ ಮತ್ತು ಗಂಡಿನ ಭಾಷೆಯಲ್ಲಿನ ಭಿನ್ನತೆಯನ್ನು ನೋಡುತ್ತೇವೆ. ಗಂಡು ಅಧಿಕಾರ ಪ್ರಭುತ್ವದ ಹಾಗೂ ದರ್ಪದ ಭಾಷೆಯನ್ನು ಬಳಸುತ್ತಾನೆ. ಪ್ರಾಚೀನ ಕೃತಿಗಳಲ್ಲಿ ಹೆಣ್ಣಿನ ಧ್ವನಿಯೇ ಶೂನ್ಯವಾಗಿ ಕೇವಲ ಗಂಡಿನ ದಮನ ಮತ್ತು ಅಧಿಕಾರ ಧ್ವನಿಯೇ ಹೆಚ್ಚಾಗಿ ಕಂಡು

ಬರುತ್ತದೆ. ಇಲ್ಲಿ ಹೆಣ್ಣು ಯಾವುದೇ ಸಂಪ್ರದಾಯದ ಸಿದ್ಧಮಾದರಿಗಳನ್ನು ಒಡೆದು ಹಾಕುವ ಧ್ವನಿಯಾಗಲಿ ಅಥವಾ ಗಂಡಿನ ವಿರುದ್ಧದ ಧ್ವನಿಯಾಗಲಿ ಕಾಣುವುದಿಲ್ಲ. ಆದ್ದರಿಂದ ಇತ್ತೀಚಿನ ಹಲವು ಕೃತಿಗಳಲ್ಲಿ ಹೆಣ್ಣಿನ ಧ್ವನಿಯೇ ಹೆಚ್ಚಾಗಿ ಕಂಡು ಬರುತ್ತಿದೆ. ಹೆಣ್ಣು ಗಂಡಿನ ವಿರುದ್ಧ ಮಾತನಾಡುವ ಅವನ ಅಧಿಕಾರವನ್ನು ಪ್ರಶ್ನಿಸುವ, ಪರಂಪರೆಯ ಸಂಕಥನಗಳನ್ನು ಒಡೆದು ತನ್ನ ಅಸ್ತಿತ್ವವನ್ನು ಆಲೋಚಿಸುವ ಹೆಣ್ಣಿನ ಚಿಂತನೆಗಳನ್ನು ನಾವು ಜಗತ್ತಿನ ಹಲವಾರು ಸಾಹಿತ್ಯ ಕೃತಿಗಳಲ್ಲಿ ನೋಡುತ್ತೇವೆ.

ಅದೇ ರೀತಿ ನಾವು ಲೋರ್ಕಾರ ಎರ್ಮಾ ಮತ್ತು ಕಂಬಾರರ ಜೋಕುಮಾರಸ್ವಾಮಿ ನಾಟಕಗಳಲ್ಲಿ ಗಂಡಿನ ವಿರುದ್ಧ ಸ್ತ್ರೀ ಪ್ರತಿಭಟನೆಯ ಸ್ವರೂಪವನ್ನು ನೋಡುತ್ತೇವೆ. ಗಂಡು ಹೆಣ್ಣನ್ನು ಅಧಿಕಾರದಿಂದ ನಿಯಂತ್ರಿಸಿ ಅವಳನ್ನು ಬಂಧಿಸಲು ಯಾವುದೇ ತಂತ್ರಗಳನ್ನು ಬಳಸಿದರು ಕೂಡ ಹೆಣ್ಣು ಅವುಗಳನ್ನು ಮೀರಿ ಅವನ ಈ ತಂತ್ರಕ್ಕೆ ವಿರೋಧ ವ್ಯಕ್ತಪಡಿಸುವುದು ಈ ಎರಡು ನಾಟಕಗಳಲ್ಲಿ ಕಂಡುಬರುತ್ತದೆ.

ಈ ನಾಟಕಗಳಲ್ಲಿ ಬರುವ ದಂಪತಿಗಳಿಬ್ಬರು ಹೊಂದಾಣಿಕೆಯಿಲ್ಲದ ದಾಂಪತ್ಯದಲ್ಲಿದ್ದಾರೆ. ಒಬ್ಬರ ಜಗತ್ತು ಇನ್ನೊಬ್ಬರಿಗೆ ಅರ್ಥವಾಗದ ಸ್ಥಿತಿ. ಇಲ್ಲಿ ನಿಯಂತ್ರಣ ಮತ್ತು ಉಲ್ಲಂಘನೆಯ ಮುಖಾಮುಖಿಯಿದೆ. ಕೊನೆಗೆ ಹೆಣ್ಣಿನ ಉಲ್ಲಂಘನೆಯೇ ಮೇಲುಗೈ ಸಾಧಿಸುತ್ತದೆ. ಸಮಾಜದ ನಿಯಮಬದ್ಧ ಪ್ರತಿನಿಧಿಗಳಾಗಿ ಗೌಡ ಹಾಗೂ ಯುವಾನ್ ಕಂಡು ಬರುತ್ತಾರೆ. ನಿಯಂತ್ರಣವನ್ನು ಪ್ರತಿಭಟಿಸಿ ನಿಯಮದ ಉಲ್ಲಂಘನೆಯಾಗಿ ಗೌಡ್ತಿ ಮತ್ತು ಎರ್ಮಾ ಕಂಡು ಬರುತ್ತಾರೆ.

ಗೌಡ : ನಿನಗೇನ ಕಡಿಮಿ ಆಗೇತಿ ಅದನಾದರೂ ಹೇಳ

ಗೌಡ್ತಿ : ಎಲ್ಲಾ ಎಲ್ಲಾ ಐತಿ !ಹೊಟ್ಟೆತುಂಬ ಊಟ ಮೈ ತುಂಬಬಟ್ಟೆ ! [೧]

ಇದರಲ್ಲಿ ಬರುವ ಗಂಡಸರು ಒಂದು ರೀತಿಯ ಬೇಜವಾಬ್ದಾರಿಯುತ ಹಾಗೂ ಹೆಣ್ಣಿನ ಆದಿಮ ಅಗತ್ಯಗಳು ಏನು ? ಕಾತರಗಳೇನು ? ಎಂದು ಗ್ರಹಿಸದ ಗಂಡಸರುಗಳಾಗಿದ್ದಾರೆ. ಇದರಲ್ಲಿ ಹೆಣ್ಣು ದೈನಂದಿನ ಸೆಣಸಾಟವನ್ನು ಮಾಡಿ ಒಪ್ಪಿತ ಸಮಾಜದಂತೆ ಮೊದಲು ನಡೆದು ಕೊನೆಗೆ ಪುರುಷ ದೌರ್ಜನ್ಯವು ಅತಿರೇಕಕ್ಕೆ ಹೋದಾಗ

ಎರ್ಮಾ ಮತ್ತು ಗೌಡ್ತಿ ಅದನ್ನು ಖಂಡಿಸಿ ಪ್ರತಿಭಟಿಸುತ್ತಿದ್ದಾರೆ. ಇದೇ ರೀತಿ ಸನ್ನಿವೇಶವನ್ನು ಎರ್ಡ್ಮಾ ನಾಟಕದಲ್ಲೂ ನೋಡುತ್ತೇವೆ.

ಮರಿಯಾ : ನಿನ್ನ ಗಂಡ ನಿನ್ನನ್ನು ಪ್ರೀತಿಸ್ತಾನೆ ಅನ್ನೋದರಲ್ಲಿ
ನನಗೆ ಅನುಮಾನ ಇಲ್ಲ

ಎರ್ಮಾ : ತಿನ್ನಲು ರೊಟ್ಟಿ, ಮಲಗಲು ಮನೆ ಕೊಟ್ಟಿದ್ದಾನೆ.[೨]

ಪುರುಷ ಸಿದ್ಧಾಂತದ ಅಭಿವ್ಯಕ್ತಿಯು ಹೆಂಡತಿ ಯಾವೊತ್ತು ತನ್ನ ಅಧೀನವೇ ಎಂಬ ಕಟ್ಟಳೆಯಿಂದ ಕೂಡಿತ್ತು. ಹೆಂಡತಿಯನ್ನು ಸಾಕುವುದೊಂದೇ ನನ್ನ ಕರ್ತವ್ಯವೆಂದು ನಂಬಿದ್ದ. ಅವಳ ಬೇಕು ಬೇಡಗಳು ಏನು ಎಂದು ತಿಳಿಯದೆ ಅವಳಿಂದ ಸಾಕಷ್ಟು ಸೇವೆಯನ್ನು ಮಾಡಿಸಿಕೊಳ್ಳುತ್ತಿದ್ದ. ಹಾಗಿದ್ದರೂ ವ್ಯವಸ್ಥೆಯ ದೌರ್ಬಲ್ಯದಿಂದ ಗಂಡಂದಿರ ಎಲ್ಲಾ ಬಗೆಯ ಆಕ್ರಮಣಗಳನ್ನು ಹೆಂಗಸರು ಸಹಿಸುತ್ತಾ ಬಂದಿದ್ದರು. ಸಹನೆಗೂ ಒಂದು ಮಿತಿ ಇದೆ ಎನ್ನುವ ಹಾಗೆ ಗಂಡಸರ ಶೋಷಣೆಯನ್ನು ಸ್ತ್ರೀ ಪ್ರತಿಭಟಿಸುತ್ತಾ ಬಂದಿದ್ದಾಳೆ. ಕೇವಲ ಮನೆಯೆ ತನ್ನ ಪ್ರಪಂಚವಲ್ಲ. ಅದರಾಚೆಗೆ ತನಗೂ ಒಂದು ಸ್ವಾತಂತ್ರ್ಯವಿದೆ. ಆಯ್ಕೆಯ ಬದುಕಿದೆ ಎಂದು ಮನಗಂಡಿರುವ ವ್ಯಕ್ತಿಗಳಾಗಿ ಎರ್ಮಾ ಮತ್ತು ಗೌಡ್ತಿ ಕಂಡು ಬರುತ್ತಾರೆ.

ಅಧಿಕಾರದ ದರ್ಪದಿಂದ ಊರಿನ ಗೌಡ ನಿಂಗಿಯನ್ನು ಕೆಣಕಿದಾಗ ಅವಳು ಗೌಡನ ವಿರುದ್ಧವೇ ತಿರುಗಿ ಬೀಳುತ್ತಾಳೆ.

ಗೌಡ : ಹೆದರತಾಳೋ ಏನೋ ! ಅಂತೂ ನೋಡಿದವರ ಬಾಯಾಗ
ನೀರ ಬರೋಹಾಂಗ ಮಸ್ತ ತುಂಬಿಕೊಂಡಾಳ ಬಿಡು
ಹೆದರಿದಿ ಏನಽ ?

ನಿಂಗಿ : ಹೆದರಾಕ ನೀ ಏನ ಹುಲಿ ಅಲ್ಲ, ಕರಡಿ ಅಲ್ಲ
ಊರ ಗೌಡ ಹೆಸರ ಕೇಳ್ಯಾನಂತ ನನ್ನ
ಬಾಯಾಗೇನೂ ಜೊಲ್ಲ ಬಂದಿಲ್ಲದಽಆಽ....[೩]

ಇಲ್ಲಿ ಸ್ತ್ರೀಯ ಪ್ರತಿರೋಧ ಕಾಣುತ್ತದೆ. 'ನಿಂಗಿ' ದಲಿತ ವರ್ಗಕ್ಕೆ ಸೇರಿದ ಮಹಿಳೆಯಾದರೂ ಗೌಡನನ್ನು ಕಂಡು ಹೆದರದ ಸ್ಥಿತಿಯನ್ನು ನೋಡಿದರೆ ಪುರುಷ ಪ್ರಧಾನ ವ್ಯವಸ್ಥೆಯ ಮಾದರಿಯನ್ನು ಒಡೆದು ಹಾಕುವ ಪಾತ್ರವಾಗಿ ಕಾಣುತ್ತಾಳೆ. ಹೆಣ್ಣು ಕೈಲಾಗದವಳು ಗಂಡಿಗೆ ಹೆದರುವವಳು, ಎಲ್ಲದಕ್ಕೂ ಭಯಪಡುವವಳು, ಎಂಬ ಸಂಕಥನವನ್ನು ಧಿಕ್ಕರಿಸಿ, ಗಂಡಿಗೆ ಸರಿಸಮಾನವಾಗಿ ವಿರೋಧವನ್ನು ವ್ಯಕ್ತಪಡಿಸುವ ಪಾತ್ರವಾಗಿ ಕಂಡುಬರುತ್ತಾಳೆ.

ಇದೇರೀತಿ ಎರ್ಡ್ಮಾ ನಾಟಕದಲ್ಲಿ ಆದಿವಾಸಿ ಹೆಂಗಸು ಈ ರೀತಿ ಹೇಳುತ್ತಾಳೆ.

ಆ.ಹೆಂ. : ಈ ಭೂಮಿಯನ್ನು ಕೆಡಿಸುವ ಕೆಟ್ಟ ರಕ್ತದ
ಗಂಡಸರನ್ನ ಸಿಡಿಲಿನಿಂದ ಉರುಳಿಸೋದಕ್ಕೆ ಎಂಥದ್ದಾದ್ರೂ
ಒಂದು ದೇವರಿದ್ರೆ ಇರ್ಲಿ [8]

ಗಂಡು ಜಾತಿಯ ಉಪೇಕ್ಷಿತ ವರ್ತನೆ ಮತ್ತು ಅಶ್ಲೀಲ ವ್ಯಕ್ತಿತ್ವ ಇವೆಲ್ಲಾ ಸೇರಿಕೊಂಡು ಹೆಣ್ಣಿನ ಮೇಲೆ ದಬ್ಬಾಳಿಕೆ ಮಾಡಿದಾಗ ದಮನಗೊಂಡ ವ್ಯಕ್ತಿತ್ವದದಿಂದ ಹೇಗೆ ಒಂದು ನಿರ್ದಿಷ್ಟ ವ್ಯಕ್ತಿತ್ವ ಹೊರಬರುತ್ತದೆಂದು ನೋಡಲು ಈ ಆದಿವಾಸಿ ಹೆಂಗಸಿನ ಮಾತುಗಳಲ್ಲಿ ನೋಡಬಹುದು.

ಹುಟ್ಟಿನಿಂದ ಹಿಡಿದು ಜೀವನದುದ್ದಕ್ಕೂ ಹೆಣ್ಣಿನ ಆಸೆ ಆಕಾಂಕ್ಷೆಗಳನ್ನು ಜೀವನ ವಿಧಾನಗಳನ್ನು ಪುರುಷ ಸಮಾಜ ನಿಯಂತ್ರಿಸುತ್ತಲೇ ಇರುತ್ತದೆ. ಪುರುಷನ ಆಶ್ರಯದಲ್ಲೇ ಬದುಕಬೇಕಾದ ಮಹಿಳೆಯ ಜೀವನ ಸಂದರ್ಭ ಅತ್ಯಂತ ಸಂಕೀರ್ಣವಾಗಿರುತ್ತದೆ. ಹೆಂಗಸಿನ ಬದುಕೆಂದರೆ ಗಂಡಸಿನ ಬದುಕಿನ ಸುತ್ತ ಅದಕ್ಕೆ ಪೂರಕವಾಗಿಯಷ್ಟೇ ನಡೆಯಬೇಕಾದ ಸಂಗತಿಯೆಂದು ಮಹಿಳೆಯ ಮೇಲೆ ಹೇರಿದೆ. ಏನೇ ಕಾನೂನು ಕಟ್ಟಳೆಗಳು ಬಂದರೂ ಸಹ ಹೆಣ್ಣಿನ ಸ್ಥಿತಿ ಹಾಗೆಯೇ ಇದೆ. ಅದನ್ನು ಬದಲಾಯಿಸಲು ಸಾಧ್ಯವೇ ಇಲ್ಲ ಎಂಬ ನಿಲುವನ್ನು ಆದಿವಾಸಿ ಹೆಂಗಸು ವ್ಯಕ್ತಪಡಿಸುತ್ತಾಳೆ.

ಇಲ್ಲಿ ದೇವರನ್ನು ಬೇಡುವುದನ್ನು ನೋಡಿದರೆ ಹೆಣ್ಣು ಎಷ್ಟೇ ಪ್ರಯತ್ನ ಪಟ್ಟರೂ ಗಂಡಸಿನ ಅಧಿಕಾರವನ್ನು ಯಜಮಾನ್ಯತೆಯನ್ನು ನಾಶಮಾಡಲು ಸಾಧ್ಯವಿಲ್ಲ ಎಂಬುವ

ಅರಿವಿನಿಂದ ಇದು ದೇವರಿಂದ ಮಾತ್ರ ಸಾಧ್ಯ ಎನ್ನುವ ನಿಟ್ಟಿನಲ್ಲಿ ಕಾಣದ ಶಕ್ತಿಗೆ ಹೇಳುವುದರ ಮೂಲಕ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ.

ಸಿದ್ಧಮಾದರಿಗೆ ಶರಣಾಗುತ್ತಿದ್ದ ಗೌಡ್ತಿ ಹಾಗೂ ಎರ್ಮಾಳನ್ನು ಬಸ್ಸಿ ಹಾಗೂ ಆದಿವಾಸಿ ಹೆಂಗಸರು ಬಡಿದೆಬ್ಬಿಸುತ್ತಿದ್ದಾರೆ. ಇಲ್ಲಿ ಬಸ್ಸಿ ಹಾಗೂ ಆದಿವಾಸಿ ಹೆಂಗಸರು ಕೆಳವರ್ಗಕ್ಕೆ ಸೇರಿದ ಹೆಂಗಸರು ಅವರಿಗೆ ಇರುವ ಸ್ವಾತಂತ್ರ್ಯದ ಕಲ್ಪನೆ ಈ ಗೌಡ್ತಿ ಹಾಗೂ ಎರ್ಮಾಳಿಗೆ ಇಲ್ಲ. ಇವರುಗಳು ಪರಂಪರೆಯನ್ನು ಎದುರಿಸಿ ಆಧುನಿಕತೆಯತ್ತ ಮುಖ ಮಾಡಿದ್ದಾರೆ. ಪುರುಷ ಸಮುದಾಯದ ನೀತಿಬೋಧನೆಗಳನ್ನು ಸಂಪೂರ್ಣವಾಗಿ ಧಿಕ್ಕರಿಸಿ ಹೆಣ್ಣು ಸಮಾನತೆಯನ್ನು ಗಳಿಸಬೇಕೆಂಬ ಬಯಕೆಯಿದೆ. ಅವರುಗಳಲ್ಲಿ ಜೀವ ಚೈತನ್ಯವನ್ನು ಹಾಗೂ ಪ್ರತಿಭಟನೆಯ ಧ್ವನಿಯನ್ನು ತುಂಬುತ್ತಾರೆ.

ಆ. ಹೆಂ.- ನಿನಗೆ ನಿನ್ನದೇ ಆದ ಮನಸ್ಸಿದೆ
ಆದರೆ ನೀನು ಅಷ್ಟೊಂದು ಮುಗ್ಧೆಯಾಗಬೇಡ ಅಷ್ಟೆ [೫]

ಅದೇ ರೀತಿ ಸಿದ್ಧಮಾದರಿಯನ್ನು ಒಡೆಯಲು ಸಾಧ್ಯವೇ ಇಲ್ಲ ಎಂಬ ಗೌಡ್ತಿಯ ಧೋರಣೆಯನ್ನು ಬಸ್ಸಿ ಬದಲಾಯಿಸುತ್ತಾಳೆ. ಗೌಡನ ನಡವಳಿಕೆಯನ್ನು ಖಂಡಿಸುತ್ತಾಳೆ. ಅವಳಲ್ಲಿ ನವಚೈತನ್ಯವನ್ನು ತುಂಬುತ್ತಾಳೆ.

ಬಸ್ಸಿ : ನೀ ಏನ ಅನ್ನು ಸಾವಿರ ಕೊಟ್ಟರೂ ಗೌಡನ ನಡಾವಳಿ
ಹೇಳಬ್ಯಾಡ ತಗಿ, ಮನ್ಯಾಗ ಎಳೀ ಹುಡುಗಿ
ಹಣೇಮ್ಯಾಲ ಕೈ ಇಟ್ಟುಕೊಂಡ ಸೋ ಅಂತ
ಹಾಡಿಕೊಂಡ ಕುಂತಿರ್ತಿ [೬]

ಗೌಡ್ತಿ ಮತ್ತು ಎರ್ಮಾ ಇಬ್ಬರೂ ಸಂಪ್ರದಾಯದ ಅನಿಷ್ಟ ರಹಸ್ಯ ಸಂಕಥನಗಳ ಶೋಷಣೆಯನ್ನುಅನುಭವಿಸುತ್ತಿದ್ದಾರೆ. ದೈಹಿಕ ಸುಖದ ಅವಶ್ಯಕತೆ ಇದ್ದರೂ ಸಹ ಪರಪುರುಷರನ್ನು ನೋಡದೆ ತಮ್ಮ ಕೈಲಾಗದ ಷಂಡ ಗಂಡಂದಿರ ಕೈಯಲ್ಲಿ ಸುಖಕಾಣುವ ಹಂಬಲ ಕಾಣುತ್ತಾರೆ. ಆದರೆ ಈ ಎರಡು ನಾಟಕಗಳಲ್ಲಿ ಕಾಣುವ ಶಾರಿ ಮತ್ತು ಆದಿವಾಸಿ ಹೆಂಗಸರು ತಮಗೆ ಹಿತ ಅನಿಸಿದಪುರುಷನ ಜೊತೆಗೆ ದೈಹಿಕ ಸಂಬಂಧ ಪಡೆದು ಲೈಂಗಿಕ

ಸುಖವನ್ನು ಅನುಭವಿಸುವುದರ ಮೂಲಕ ಎರ್ಮಾ ಮತ್ತು ಗೌಡ್ತಿಗೆ ಮುಖಾಮುಖಿಯಾಗಿದ್ದಾರೆ.

ಆ. ಹೆಂ. : ಹಾಂ...(ನಗುತ್ತಾಳೆ) ಎಷ್ಟೋಗಂಡಸರಜೊತೆ ಆಟ ಆಡಿದೀನಿ ಒಳ್ಳೇ ಮಜಾ ತಗೊಂಡಿದೀನಿ [೭]

ಇದೇ ರೀತಿ ಮಾತುಗಳನ್ನು ಜೋಕುಮಾರ ಸ್ವಾಮಿ ನಾಟಕದಲ್ಲಿ ಶಾರಿಯು ಹೇಳುತ್ತಾಳೆ.

ಶಾರಿ : ನನಗೂ ವಯಸ್ಸಾಗಿ ಗಿರಾಕಿ ಕಡಿಮೆ ಆಗ್ಯಾವ, ಈ ಕಾಯಿನ ಪಲ್ಲೆ ಮಾಡಿ ನೀಡಿದರ ಇದ್ದ ಗಿರಾಕಿ ಆದರೂ ನನ್ನ ಮನೀ ಮುಂದ ಬಿದ್ದಿರತಾವ! [೮]

ಆದಿವಾಸಿ ಹೆಂಗಸು ಹಾಗೂ ಶಾರಿ ಇವರಿಬ್ಬರೂ ಲೈಂಗಿಕತೆಯಲ್ಲಿ ಸ್ವಾತಂತ್ರ್ಯ ಮತ್ತು ಮುಕ್ತತೆಯ ಪ್ರತಿರೂಪವಾಗಿ ಕಾಣುತ್ತಾರೆ. ಸಂಪ್ರದಾಯದ ಗೋಡೆಯ ನಡುವೆ ಸಿಲುಕಿ ದೈಹಿಕ ಸುಖಕ್ಕಾಗಿ ಹಂಬಲಿಸುವ, ಗೌಡ್ತಿ ಮತ್ತು ಎರ್ಮಾರಿಗೆ ಈ ಇಬ್ಬರು ಸಂಘರ್ಷದ ಮುಖಾಮುಖಿಯಾಗಿದ್ದಾರೆ. ಎರ್ಮಾ ಮತ್ತು ಗೌಡ್ತಿ ಇಬ್ಬರು ತಮಗೆ ತಮ್ಮ ಗಂಡಂದಿರು ಸುಖ ನೀಡುತ್ತಾರೆ ಎಂಬ ಆಶಯ ಇಟ್ಟುಕೊಂಡು ಸಮಾಜದ ಕಟ್ಟುಪಾಡಿಗೆ ಒಳಗಾಗಿ ತಮ್ಮ ಕನಸುಗಳನ್ನು ತಾವೇ ಕೊಂದು ಕೊಳ್ಳುತ್ತಾರೆ. ಶಾರಿ ಮತ್ತು ಆದಿವಾಸಿ ಹೆಂಗಸು ಮುಕ್ತ ಲೈಂಗಿಕತೆಯ ಸುಖವನ್ನು ಪಡೆಯುವುದರ ಮೂಲಕ ಪರಂಪರೆಗೆ ಮುಖಾಮುಖಿಯಾಗಿದ್ದಾರೆ. ಸ್ತ್ರೀವಾದಿಗಳು ಹೇಳುವ ಹೆಣ್ಣಿಗೆ ಲೈಂಗಿಕತೆಯಲ್ಲಿ ಮುಕ್ತತೆ ಇರಬೇಕು ಎಂಬುದಕ್ಕೆ ಶಾರಿ ಮತ್ತು ಆದಿವಾಸಿ ಹೆಂಗಸು ಪುರುಷನು ಸೃಷ್ಟಿಸಿರುವ ಪರಂಪರೆಯನ್ನು ಪ್ರತಿಭಟಿಸುವ ಉದಾಹರಣೆಯಾಗಿ ಈ ನಾಟಕಗಳಲ್ಲಿ ಕಾಣುತ್ತಾರೆ.

ಮೊದಲಿನ ಕಾಲದಲ್ಲಾದರೆ, ಮನೆವಾರ್ತೆಗಾಗಿ ಮಹಿಳೆ ತನ್ನ ಸಂಪೂರ್ಣ ವೇಳೆಯನ್ನು ವಿನಿಯೋಗಿಸಬೇಕಾಗುತ್ತಿತ್ತು. ಕುಟ್ಟುವ, ಬೀಸುವ, ನೀರೆತ್ತುವ ಕೆಲಸಗಳನ್ನು ಸ್ವತಃ ಕೈಯಿಂದ ಮಾಡಬೇಕಾಗುತ್ತಿತ್ತು. ಅವಿಭಕ್ತ ಕುಟುಂಬಗಳಾಗಿರುತ್ತಿದ್ದುದರಿಂದ ಕಾಲಕಾಲಕ್ಕೆ ಸರಿಯಾಗಿ ಅಡಿಗೆ, ಆಹಾರ, ಅತಿಥಿ, ಅಭ್ಯಾಗತರ ಸೇವೆ, ವಯಸ್ಸಾದವರ, ರೋಗಿಗಳ ಮಕ್ಕಳ ಸೇವೆ ಇವುಗಳಲ್ಲಿ ಅವಳ ಸಮಯವೆಲ್ಲಾ ಕಳೆಯುತ್ತಿತ್ತು. ಈಗಾದರೋ

ವಿಭಕ್ತ ಕುಟುಂಬ ಪದ್ಧತಿ ಹಾಗೂ ಯಾಂತ್ರಿಕ ಸಲಕರಣೆಗಳ ಉಪಯೋಗ ಬಂದು ಮಹಿಳೆ ಸಾಕಷ್ಟು ಸಮಯವನ್ನು ಉಳಿಸಬಹುದಾಗಿದೆ. ಹೀಗೆ ಉಳಿಸಿದ ಸಮಯವನ್ನು ಅವಳು ಸಮಾಜ ಸೇವೆಯಲ್ಲಿಯೇ ಗೃಹ ಕೈಗಾರಿಕೆಯಲ್ಲೋ ಅಥವಾ ಬೇರಾವುದರೊಂದು ಉದ್ಯೋಗದಲ್ಲಿಯೇ ತೊಡಗಿಸಿ ಸದುಪಯೋಗ ಪಡಿಸಬಹುದಾಗಿದೆ. ಆದರೆ ಅಲ್ಲಿಯೂ ಪುರುಷನ ಸಹಕಾರ ಅವಳಿಗೆ ಅಗತ್ಯ ಎಂಬುದನ್ನು ನಾವು ಮರೆಯುವಂತಿಲ್ಲ.

ಇದೇ ರೀತಿ ಆಧುನಿಕ ಸಂವೇದನೆಯನ್ನು ಎರ್ಮಾ ರೂಢಿಸಿಕೊಂಡು ಈ ಸಮಾಜ ಸೃಷ್ಟಿಸಿರುವ ಗಂಡು ಹೊರಗಡೆ ದುಡಿಯಬೇಕು ಹೆಣ್ಣು ನಾಲ್ಕು ಗೋಡೆಗಳ ಬಂಧನದಲ್ಲೇ ಕಾಲ ಕಳೆಯಬೇಕೆಂಬ ಧೋರಣೆಗೆ ವಿರೋಧ ವ್ಯಕ್ತ ಪಡಿಸುವುದನ್ನು ಈ ನಾಟಕದಲ್ಲಿ ನೋಡಬಹುದು.

ಎರ್ಮಾ - ನನ್ನ ಉಳಿದ ಬದುಕನ್ನು ಕೋಳಿಗಳಿಗೆ ಗುಟುಕಿಡುತ್ತಾ,
ಕಿಟಕಿಗಳಿಗೆ ಚಂದದ ಪರದೆಗಳನ್ನು ಹರವುತ್ತಲೇ
ಸವೆಸ ಬೇಕೇನು ? [೯]

ಈ ನಾಟಕದಲ್ಲಿ ಕೂಡ ಆಧುನಿಕ ಮಹಿಳೆಯಂತೆ ಗೃಹಬಂಧನದಲ್ಲಿರುವ ಇಚ್ಛಿಸುವುದಿಲ್ಲ. ಇವಳೂ ಕೂಡ ಬಿಡುಗಡೆಯ ಹಾದಿಗೆ ಹೆಜ್ಜೆಯಿಡುತ್ತಾಳೆ. ಹಳೆಯಗೊಡ್ಡು ಸಂಪ್ರದಾಯಗಳನ್ನು ಮುರಿಯುತ್ತಾಳೆ. ಇಲ್ಲಿ ಸ್ತ್ರೀಯ ಸ್ವಾತಂತ್ರ್ಯದ ವಾಂಛಲ್ಯ ಹಾಗೂ ಅವಳ ಬಯಕೆಯನ್ನು ನೋಡುತ್ತೇವೆ. ಒಂದು ಹೆಣ್ಣಿನ ಜಗತ್ತನ್ನು ಗ್ರಹಿಸಲಾರದ ಪುರುಷ ಜಗತ್ತಿಗೆ ತಕ್ಕ ಪಾಠ ಕಲಿಸುತ್ತಾಳೆ.

ಎರ್ಮಾ - ಹೊಂದಿಕೊಳ್ಳೋದು ? ಇಲ್ಲಿ ಯಾವುದು ಹ್ಯಾಗಿದೆಯೋ ಹಾಗೇ
ಒಪ್ಪಿಕೊಳ್ಳೋಕೆ - ನಾನು ಈ ಮನೆಗೆ ಬಂದದ್ದು ಅಂತ ನೀನು
ತಿಳುಕೊಂಡಿದ್ದೀಯೇನು ? ಎಂದು ಅವರು ನನ್ನ ಕೈ ಕಾಲುಗಳನ್ನು
ಚಿಂದಿ ಬಟ್ಟೆಯಲ್ಲಿ ಸುತ್ತಿ ಗುಂಡಿಯೊಳಕ್ಕೆ ಕುಕ್ಕುತ್ತಾರೋ ಆಗ
ಇವುಗಳನ್ನೆಲ್ಲಾ ನಾನು ಒಪ್ಪಿಕೊಳ್ತೀನಿ ಆದರೆ ಅದಕ್ಕಿಂತ ಮುಂಚೆ
ಖಂಡಿತಾ ಇಲ್ಲ [೧೦]

ಇಲ್ಲಿ ಎರ್ಮಾ ಕೇವಲ ದಾಂಪತ್ಯದೊಳಗಿನ ಅತೃಪ್ತಿಯಿಂದಾಗಿ ಹೊಸಿಲಿನಿಂದಾಚೆಗೆ ಜಿಗಿದು ಪರಿಹಾರ ಕಂಡುಕೊಳ್ಳುವ ಸರಳ ಸ್ತ್ರೀವಾದಿ ಪಾತ್ರವಲ್ಲ. ಬದಲಿಗೆ ನಿರಂತರವಾದ ಸೃಜನಶೀಲ ದಾಹ, ಪ್ರೀತಿಯ ಕಾತುರ ಹಾಗೂ ಸೃಷ್ಟಿಸುವ ಹಂಬಲವನ್ನು

ಪ್ರತಿನಿಧಿಸುವವಳಾಗಿದ್ದಾಳೆ. ಅವಳಲ್ಲಿ ನಾವು ಶಾಶ್ವತವಾಗಿ ಹೆಣ್ಣಿಗೆ ಬೇಕಾಗಿರುವ ವಿಮೋಚನೆಯ ಪರಿಕಲ್ಪನೆಯನ್ನು ನೋಡುತ್ತೇವೆ.

ಕಂಬಾರರಿಗಿಂತ ಭಿನ್ನವಾಗಿ ಲೋರ್ಕಾ ತನ್ನ ನಾಟಕದಲ್ಲಿ ಪಾತ್ರಗಳನ್ನು ಸೃಷ್ಟಿಸಿದ್ದಾನೆ. ಹೆಣ್ಣಿನ ಸಿದ್ಧಮಾದರಿಯನ್ನು ಒಡೆದು ಹೊಸ ರೀತಿಯ ಹೆಣ್ಣನ್ನು ಲೋರ್ಕಾ ಸೃಷ್ಟಿಸಿದ್ದಾನೆ. ಪರಂಪರೆಗೆ ವಿರುದ್ಧವಾದ ಮತ್ತು ಸಂಪ್ರದಾಯದ ಸಿದ್ಧಮಾದರಿಗಳನ್ನು ಒಡೆದು ಅದಕ್ಕೆ ಮುಖಾಮುಖಿಯಾಗಿ ಆಧುನಿಕ ಸಂವೇದನೆಯನ್ನು ತಂದಿದ್ದಾನೆ.

ಹುಡುಗಿ - ೨ :ನಮ್ಮ ನಿಜವಾದ ಮದುವೆ ಚರ್ಚಿನಲ್ಲಿ ಆಗೋದಕ್ಕೆ
ಮುಂಚೆಯೇ ಆಗಿತ್ತು
ಅಂಥವಕ್ಕೆಲ್ಲಾ ತಳ್ಕೋರು ಹಳೆಯ ತಲೆಗಳು ಮಾತ್ರ
ಈ ಮದುವೆ ಗಿದುವೆ ಅನ್ನೋದು ಹಳೆಯ ಕಾಲದ
ಗೊಡ್ಡು...'' [೧೧]

ಈ ಹುಡುಗಿ ಹಳೆಯ ಸಂಪ್ರದಾಯದ ಸಿದ್ಧಮಾದರಿಗಳನ್ನು ಒಡೆದು ಹೊಸ ತಲೆಮಾರಿನ ಆಧುನಿಕತೆಯ ಸಂವೇದನೆಯ ಸ್ತ್ರೀಯಾಗಿ ಕಾಣಿಸುತ್ತಾಳೆ.

ಅಮೇರಿಕಾದ ಪ್ರಖ್ಯಾತ ಮಹಿಳಾ ವಿಮೋಚನವಾದಿ ಮಾರ್ಗರೆಟ್ ಫುಲರ್ ಮಹಿಳಾ ಸ್ವಾತಂತ್ರ್ಯವನ್ನು ಈ ರೀತಿ ವ್ಯಾಖ್ಯಾನಿಸಿದ್ದಾಳೆ. ''ಮಹಿಳೆಗೆ ಬೇಕಾಗಿರುವುದು ಸ್ವೇಚ್ಛೆಯಲ್ಲ. ಆಳುವ ಅಧಿಕಾರವಲ್ಲ. ಆಕೆಗೆ ಅವಶ್ಯವಿರುವುದು ಸಹಜವಾಗಿ ಬೆಳೆಯುವ ಅವಕಾಶ ಸ್ವಂತದ ಬುದ್ಧಿಯನ್ನೂ ಉಪಯೋಗಿಸುವ ಅವಕಾಶ. ಒತ್ತಡ ದಬ್ಬಾಳಿಕೆಯಿಂದ ಮುಕ್ತವಾದ ಬದುಕನ್ನು ಹೊಂದುವ ಅವಕಾಶ'' [೧೨]

ಇದೇ ರೀತಿಯ ಮನೋಧೋರಣೆಯನ್ನು ನಾವು ಎರ್ಮಾ ನಾಟಕದಲ್ಲಿ ನೋಡಬಹುದು.

ಹುಡುಗಿ -೨ : (ನಗುತ್ತಾಳೆ) ಆದರೆ ಒಂದು ಸಂಗತೀನ ಮಾತ್ರ ಈ
ಬದುಕು ನನಗೆ ಕ ಲಿಸಿದೆ. ಬಹಳಷ್ಟು ಮಂದಿ
ತಮ್ಮ ಬದುಕನ್ನು ಮನೆಯೆಂಬ ಗಾಜಿನ ಸೀಸೆಯೊಳಗೆ
ಕೂಡಿಹಾಕಿಕೊಂಡು ತಾವು ಬಹುಮಟ್ಟಿಗೆ ದ್ವೇಷಿಸುವ
ಕೆಲಸಗಳನ್ನೇ ಮಾಡ್ತಾ ಹೋಗ್ತಾರೆ, ಆದರೆ ನನಗೆ, [೧೩]

ಲೋರ್ಕಾ ಈ ನಾಟಕದಲ್ಲಿ ಪರಂಪರೆಯನ್ನು ವ್ಯಂಗ್ಯ ಮಾಡಿ, ಅದರ ನಿಯಂತ್ರಣಗಳನ್ನು ಮುರಿಯುವ ಪ್ರಯತ್ನ ಮಾಡಿದ್ದಾನೆ. ಇಡೀ ಸಂಪ್ರದಾಯದ ಸಿದ್ಧಮಾದರಿಗಳನ್ನು ಒಡೆದು ಹೊಸ ತಲೆಮಾರಿನ ಆಧುನಿಕ ಸಂವೇದನೆಯನ್ನು ತಂದಿದ್ದಾನೆ. ಹಿಂದೆ ಹೇರಿದ್ದ ಅನೇಕ ಕಟ್ಟು ಪಾಡುಗಳನ್ನು ವ್ಯಂಗ್ಯ ಮಾಡಿದ್ದಾನೆ. ಸ್ತ್ರೀಯರು ಪುರುಷರಿಗಿಂತ ಕಡಿಮೆ ಇಲ್ಲ. ಅವಳೂ ಕೂಡ ಅವನ ಸರಿಸಮಾನವಾಗಿ ಎಲ್ಲಾ ಕೆಲಸಗಳನ್ನು ಮಾಡಬಲ್ಲಳು ಎಂಬ ಆಧುನಿಕ ಸಂವೇದನೆಯನ್ನು ತಂದಿದ್ದಾನೆ.

ಹೆಣ್ಣಿನ ಬದುಕಿನಲ್ಲಿ ವಿವಾಹವೆನ್ನುವುದು ಮಹತ್ತರ ಬದಲಾವಣೆಗಳನ್ನು ತರುವ ಘಟನೆ. ಹೆಣ್ಣಿನ ಆಸೆ, ಆಕಾಂಕ್ಷೆಗಳು, ಕಲಿಕೆ, ಸಾಮರ್ಥ್ಯಗಳು ಸೃಜನಶೀಲತೆಯ ಅಳಿವು-ಉಳಿವುಗಳು ಬಹಳಷ್ಟು ಬಾರಿ ವಿವಾಹವನ್ನು ಅವಲಂಬಿಸಿರುತ್ತದೆ. ಗಂಡಿನ ಪಾಲಿಗೆ ಇದು ಹಾಗಾಗಬೇಕೆಂದೇನೂ ಇಲ್ಲ. ಬಯಸಲಿ ಬಯಸದಿರಲಿ ವಿವಾಹ ಹೆಣ್ಣಿನ ಪಾಲಿಗೆ ಬಂಧನವಾಗಿಯೇ ಪರಿಣಮಿಸುತ್ತದೆ. ಈ ಪವಿತ್ರಬಂಧನ ಪ್ರೇಮ ಬಂಧನವೂ ಆಗಬೇಕಾದರೆ ಅದುಬಹಳಷ್ಟು ತ್ಯಾಗವನ್ನು ಸ್ತ್ರೀ ಪುರುಷರಿಬ್ಬರಿಂದಲೂ ಅಪೇಕ್ಷಿಸುತ್ತದೆ. ಆದರೆ ಈ ಅಪೇಕ್ಷೆ ಹೆಣ್ಣಿನ ಕಡೆಯಿಂದಲೇ ಹೆಚ್ಚಿರುತ್ತದೆ. ವೈವಾಹಿಕ ಸಮಸ್ಯೆಗಳನ್ನು ನಿವಾರಿಸಿ ಕೊಳ್ಳಲು ಎಷ್ಟೇ ಕಾನೂನುಗಳು ಬಂದರೂ ಒಟ್ಟಾರೆಯಾಗಿ ಸಮಾಜದಲ್ಲಿ ವಿವಾಹವನ್ನು ಕುರಿತಾದ ಪರಿಕಲ್ಪನೆ ಬದಲಾಗದಿದ್ದರೆ ಸಮಸ್ಯೆಗಳು ಸಂಪೂರ್ಣವಾಗಿ ಇಲ್ಲದಂತಾಗುವುದಿಲ್ಲ. ಆದ್ದರಿಂದ ಯಾವುದೇ ಸಮಾಜದಲ್ಲಿನ ವಿವಾಹದ ಚೌಕಟ್ಟು ಮಹಿಳೆಯರ ಸ್ಥಾನಮಾನದ ಸ್ವರೂಪ, ಧೋರಣೆಗಳನ್ನು ರೂಪಿಸುವ ನಿರ್ಣಾಯಕ ಅಂಶವಾಗಿರುತ್ತದೆ. ಬರ್ಟ್ರೆಂಡ್ ರಸೆಲ್ ಹೇಳುವಂತೆ ''ಒಳ್ಳೆಯ ವಿವಾಹದ ಜೀವಾಳವಿರುವುದು ಪರಸ್ಪರ ವ್ಯಕ್ತಿತ್ವಗಳಿಗೆ ನೀಡುವ ಗೌರವದಲ್ಲಿ ಇಬ್ಬರ ನಡುವಿರುವ ಆಳವಾದ ದೈಹಿಕ ಮಾನಸಿಕ ಮತ್ತು ಆಧ್ಯಾತ್ಮಿಕ ವ್ಯಕ್ತಿತ್ವಗಳು ಸಮ್ಮಿಳಿತಗೊಂಡು ಸ್ತ್ರೀಪುರುಷರ ನಡುವಣ ಪ್ರೀತಿಯು ಹೆಚ್ಚು ಫಲಕಾರಿಯಾಗಲು ಅಪಾರವಾದ ತ್ಯಾಗದ ಮನೋಭಾವ ಅವಶ್ಯವಾಗುತ್ತದೆ. ಇಂತಹ ತ್ಯಾಗವು ಸ್ವಯಂ ಇಚ್ಛೆಯಿಂದ ಕೂಡಿರದಿದ್ದರೆ ಅದು ಪ್ರೀತಿಯ ಆಸ್ತಿಭಾರವನ್ನು ನಾಶ ಮಾಡಿಬಿಡುತ್ತದೆ.''[೧೪] ಈ ಮಾತುಗಳು ಯಾವುದೇ ದೇಶದ ಸಮಾಜಕ್ಕೂ ಅನ್ವಯಿಸುವ ಮಾತಾಗಿದೆ.

ಆದರೆ ಈ ನಾಟಕದಲ್ಲಿ ಬರುವ ಗೌಡ ಮತ್ತು ಯುವಾನ್ ತ್ಯಾಗ ಮನೋಭಾವವನ್ನು ಹೊಂದಿಲ್ಲದವರಾಗಿದ್ದಾರೆ. ಕೇವಲ ತಮ್ಮ ಹೆಂಡತಿಯರ ತ್ಯಾಗವನ್ನು ಮಾತ್ರ ಅಪಬಳಕೆ ಮಾಡಿಕೊಳ್ಳುತ್ತಿರುವ ಪಾತ್ರಗಳಾಗಿ ಕಂಡುಬರುತ್ತಾರೆ. ಗೌಡ್ತಿ ಮತ್ತು ಎರ್ಮಾ ತಮ್ಮ ಗಂಡಂದಿರ ಸುಖಕ್ಕಾಗಿ ತಮ್ಮ ಸುಖವನ್ನು ತ್ಯಾಗ ಮಾಡುವ ಪಾತ್ರಗಳಾಗಿ ಮೊದಲು ಕಂಡು ಬಂದರೂ ನಂತರ ಈ ಸಮಾಜದ ಕಟ್ಟುಪಾಡುಗಳನ್ನು ಮೀರುತ್ತಾರೆ.

ಗೌಡ್ತಿ : ಯಾಕೋ ಚೆಲುವಾ ? ಯಾರ ಮುಂದ ಮಾತಾಡ್ತಿಗೊತ್ತೈತಿಲ್ಲ ?
ಗಂಡುಳ್ಳ ಗರತಿ ಊರಗೌಡತೀನ ತರಿಬಿ ಕೇಳತಿ
ಎಚ್ಚರಿದ್ದೀಯಿಲ್ಲೋ ?೧೫

ಇವಳು ಸಂಪ್ರದಾಯಕ್ಕೆ ನಿಷ್ಠವಾಗಿ ಸಮಾಜದ ಒಡೆತನಕ್ಕೆ ಸಿಲುಕಿ ಅದನ್ನು ಪಾಲಿಸುವ ವ್ಯಕ್ತಿ ಪ್ರತಿನಿಧಿಯಾಗಿ ಗೌಡ್ತಿ ಕಾಣುತ್ತಾಳೆ. ಇವಳಿಗೆ ತನ್ನ ಗಂಡನಿಂದ ಯಾವುದೇ ಸುಖ ದೊರೆಯದೇ ಇದ್ದರೂ ಸಹ ಪರ ಪುರುಷನ ಸಂಗ ಮಾಡುವುದು ತಪ್ಪು ಎಂಬ ತಿಳುವಳಿಕೆಯಿದೆ. ಇವಳು ಬಸಣ್ಣನಿಗೆ ಗಂಡ ಇರುವ ಹೆಣ್ಣನ್ನು ನೋಡುವುದು ಪಾಪಕರ ಎಂದು ತಿಳಿಸಿ ಹೇಳುತ್ತಾಳೆ.

ಇದೇ ರೀತಿ ಪರಪುರುಷನನ್ನು ನಿರಾಕರಿಸುವ ಪ್ರತಿಭಟನೆಯನ್ನು ಎರ್ಮಾ ಮಾಡುತ್ತಾಳೆ.

ಎರ್ಮಾ ;ನಾನು ಸಲೀಸಾಗಿ ಬೇರೆ ಗಂಡಸಿನ ಜೊತೆ ಓಡಿ ಹೋಗ್ಬಿಡ್ತೀನಿ ಅಂತ ನೀನು ತಿಳ್ಕೊಂಡಿದಿಯೇನು ? ನನಗೆ ನನ್ನದೇ ಆದ ಗೌರವ ಮನಸ್ಸಾಕ್ಷಿಗಳಿಲ್ಲವೇನು ? ಬೆಟ್ಟಾನ ನೀರು ಹೇಗೆ ಹತ್ಲಿಕ್ಕಾಗಲ್ವೋ ಹಗಲಿನಲ್ಲಿ ಚಂದ್ರ ಹೇಗೆ ಬೆಳಗೋಕ್ಕಾಗಲ್ವೋ, ಅದೇ ರೀತಿ ನಾನು ಅಂಥದ್ದನ್ನು ಎಂದೂ ಮಾಡಲಾರೆ. ನಾನು ಇನ್ನೊಬ್ಬನ ಸೂಳೆಯಾಗಿ ಅವನ ಎಲ್ಲಾ ತೀಟೆ, ತಿಕ್ಕಲುತನಗಳನ್ನು ಒಪ್ಪಿ ಕೊಳ್ಳಬಹುದು ಅಂತ ತಿಳ್ಕೊಂಡಿದೀಯೇನು ? [೧೬]

''ಲೈಂಗಿಕ ಪ್ರಶ್ನೆಯನ್ನು ಹೊಂದಿರುವ ದಾಂಪತ್ಯ ನೀತಿಬಲು ಜಿಗುಟಿನ ಸಮಸ್ಯೆ ನಮ್ಮ ಸಮಾಜದ ಮನು ಧರ್ಮರುಗಳು ಅರ್ವಾಚೀನ ನೀತಿಕಾರರು ಬಣ್ಣಿಸುವಷ್ಟು ಸುಲಭದಲ್ಲಿ ಖಂಡ ತುಂಡ ನಿಯಮಗಳನ್ನು ಹಿಂಬಾಲಿಸುವ ಪ್ರಶ್ನೆ ಅದಲ್ಲ. ಈ ಮಾತುಗಳು

ದಾಂಪತ್ಯ ನೀತಿಯು ಅಪೇಕ್ಷಿಸುವ ಸ್ವಾತಂತ್ರ್ಯವನ್ನು ಹಾಗೂ ಮಾನವೀಯ ನೆಲೆಯನ್ನು ಪ್ರಶ್ಲಾಘಿಸುತ್ತದೆ. ವಾಸ್ತವದಲ್ಲಿ ಇಂತಹ ಲೈಂಗಿಕ ಸ್ವಾತಂತ್ರ್ಯದ ನೀತಿಯು ಬಹಳಷ್ಟು ಬಾರಿ ಏಕಪಕ್ಷೀಯವಾಗಿರುತ್ತದೆ. ಗಂಡಿನ ಪರವಾಗಿ ವಕಾಲತ್ತು ವಹಿಸುತ್ತದೆ. ಮನುಷ್ಯನ ಮುಖ್ಯ ಪ್ರವೃತ್ತಿಗಳಲ್ಲೊಂದಾದ ಕಾಮ, ಅದರ ಪೂರೈಕೆಗಾಗಿ ಸೃಷ್ಟಿಯಾಗುವ ಗಂಡು ಹೆಣ್ಣಿನ ಸಂಬಂಧ, ಇವು ಸಂಸ್ಥೀಕರಣಗೊಂಡಾಗ ಸೃಷ್ಟಿಯಾಗುವ ಸಮಸ್ಯೆಗಳು ಅಪಾರ ವಿವಾಹ ಸಂಸ್ಥೆ ಹೊರಿಸುವ ಹತ್ತು ಹಲವು ಬಿಗಿನಿಯಮಗಳು ತೊಡಗಿಸುವ ಅನೇಕ ಸಂಪ್ರದಾಯ ಸಂಕೋಲೆಗಳು ಸಮಾಜದ ಮುಗ್ಧ ಜೀವಿಗಳನ್ನು ಬಲಿ ತೆಗೆದುಕೊಳ್ಳುವ ರೀತಿ ಊಹೆಗೆ ನಿಲುಕದ್ದು''[೧೭]

ಇದೇ ರೀತಿ ಬಲಿಯಾಗುತ್ತಿರುವ ಪಾತ್ರಗಳಾಗಿ ಎರ್ಮಾ ಮತ್ತು ಗೌಡ್ತಿ ಕಾಣುತ್ತಾರೆ. ಆದರೆ ಇವರುಗಳು ಬಲಿಯಾಗುವ ಮುಂಚೆಯೇ ಎಚ್ಚೆತ್ತು ಪುರುಷ ಸಮಾಜವನ್ನು ಪ್ರತಿಭಟಿಸುತ್ತಾರೆ.

ಎರ್ಮಾ : ಆದರೆ ನಾನು ಖಾಲಿಯಿಲ್ಲ. ದ್ವೇಷ ನನ್ನೊಳಕ್ಕೆ ತುಂಬಿಕೊಳ್ತಾ ಇದೆ ಅದು ನನ್ನ ತಪ್ಪೇನು ? ಹಾಸಿಗೆ ಇರೋದು ಗಂಡಸರ ಸುಖಕ್ಕಾಗಿ ಮಾತ್ರಾನ ? ಮಂಚಕ್ಕಾಗಿ ಮಾತ್ರಾನಾ ?[೧೮]

ಎರ್ಮಾಳ ಮಾತಿನಲ್ಲಿ ಹೆಣ್ಣಿಗೆ ಎಲ್ಲಾ ರೀತಿಯಲ್ಲೂ ಸ್ವಾತಂತ್ರ್ಯ ಬೇಕು ಎಂಬುದಾಗಿದೆ. ಗಂಡಿನಂತೆ ಹೆಣ್ಣಿಗೂ ಲೈಂಗಿಕತೆಯ ವಿಷಯದಲ್ಲಿ ಮುಕ್ತತೆ ಬೇಕು ಎಂಬ ಆಶಯವನ್ನು ವ್ಯಕ್ತಪಡಿಸುತ್ತಾಳೆ. ಆದರೆ ಎರ್ಮಾ ಕೇವಲ ತನ್ನ ಮಾತುಗಳ ಮೂಲಕ ಮಾತ್ರ ಪ್ರತಿಭಟಿಸುತ್ತಾಳೆ ಹೊರತು ಪರಂಪರೆಯನ್ನು ಧಿಕ್ಕರಿಸಲು ಸಾಧ್ಯವಾಗುವುದೇ ಇಲ್ಲ. ಆಧುನಿಕ ಮುಕ್ತ ಜಗತ್ತನ್ನು ಎರ್ಮಾ ನಿರಾಕರಿಸುತ್ತಾಳೆ. ಅವಳ ಮನಸ್ಸು ದ್ವಂದ್ವದಿಂದ ಕೂಡಿದೆ.

ಆದರೆ ಗೌಡ್ತಿ ಮೊದಲು ನೈತಿಕತೆಯ ಮಾತುಗಳನ್ನಾಡಿದರೂ ಕೊನೆಗೆ ಬಸಣ್ಣನ ಜೊತೆ ಅನೈತಿಕ ಸಂಬಂಧವನ್ನು ಹೊಂದಲು ಮುಂದಾಗುತ್ತಾಳೆ. ಇವಳು ಆಧುನಿಕ ಮುಕ್ತ ಜಗತ್ತನ್ನು ಸ್ವೀಕರಿಸುತ್ತಾಳೆ.

ಈ ನಾಟಕದಲ್ಲಿ ಕಂಬಾರರು ಹೆಣ್ಣಿನ ಧೈರ್ಯ ಮತ್ತು ಹೊಸ ಆಧುನಿಕ ಸಂವೇದನೆಯನ್ನು ತಂದಿದ್ದಾರೆ.

ಗೌಡ : ಏ ಹುಚ್ಚ ಹುಡುಗೀ, ಯಾರ ಜೋಡಿ ಮಾತಾಡ್ತಿ

ನಿಂಗಿ : ಕಾಣದೇನ ? ಊರಗ ಸೂರ್ಯನ ಬೆಳಕ ಐತಿ ನನಗು

ಎರಡು ಕಣ್ಣದಾವು ಹೇಳಲಿ ? ಇದ ಊರ ಗೌಡನ ಮಸಡಿ,

ಇವು ನನ್ನ ಚಪ್ಪಲಿ [೧೯]

ಇದೇ ರೀತಿ ಎರ್ಮಾ ನಾಟಕದಲ್ಲಿ ಎರ್ಮಾ ಯುವಾನ್‌ಗೆ ನನಗೆ ಯಾರ ಭಯವೂ ಇಲ್ಲ ಎಂಬ ಮಾತನ್ನು ಧೈರ್ಯವಾಗಿ ಹೇಳಿದ್ದಾಳೆ.

ಎರ್ಮಾ : ನನಗೆ ಯಾರ ಅಂಜಿಕೆ [೨೦]

ಲೋರ್ಕಾ ಮತ್ತು ಕಂಬಾರ ಇವರಿಬ್ಬರೂ ತಮ್ಮ ನಾಟಕಗಳಲ್ಲಿ ಪುರುಷ ಕೇಂದ್ರಿತ ವ್ಯವಸ್ಥೆಯ ನ್ಯೂನತೆಗಳನ್ನು ಪ್ರಶ್ನೆ ಮಾಡುತ್ತಾ ಸ್ತ್ರೀಯರ ಧೈರ್ಯ ದೃಢ ನಿರ್ಧಾರಕ್ಕೆ ಒತ್ತು ನೀಡಿದ್ದಾರೆ. ಇದರಿಂದ ಪುರುಷರು ತಪ್ಪು ಮಾಡಿದರೆ ಅದನ್ನು ಸ್ತ್ರೀಯರು ಪ್ರಶ್ನಿಸುತ್ತಾರೆ ಎಂಬುದನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ

ಗೌಡನ ಅಧಿಕಾರ ದರ್ಪ ಹೇಗಿದೆ ಎಂದರೆ ನಿಂಗಿಯನ್ನು ಒಂದು ಕೋಳಿಗೆ ಹೋಲಿಸಿ ಅವಳನ್ನು ಕೆಣಕುತ್ತಾನೆ. ಆದರೆ ನಿಂಗಿಯು ಅವನ ಅಧಿಕಾರಕ್ಕೆ ಮಣಿಯದೆ ಅವನಿಗೆ ತಿರುಗೇಟು ನೀಡುತ್ತಾಳೆ.

ಗೌಡ : ಆರು ತಿಂಗಳಾಯ್ತು, ತಪ್ಪಿಸ್ಯಾಡಿ ತಿರಿಗಿದಿ ನಿನ್ನನೋಡಿದ

ದಿನಾನ ಮಸಾಲಿ ಕೊಂಡ ಇಟ್ಟದೇನು ಇಂದ ಸಿಗಬಿದ್ದೆ

ನನ್ನ ಕೋಳೀ ! ಇನ್ನ ಹಟ ಹಿಡೀಬ್ಯಾಡ, ನಡಿ ಹೋಗೋಣು,

ನಿಂಗಿ : ಮಾನಗೇಡಿ, ಮಸಾಲಿ ಒಯ್ದು ನಿನ್ನ ಹೇಂತಿ ಮ್ಯಾಲ ಹಾಕಿ

ನೆಕ್ಕೋ ಹೋಗ, ಇದ ಽ ಅನ್ನಾಣ ಅಂದಿ, ಇನ್ನೊಮ್ಮಿ

ಅಂದರ ಅದ ಮಸಾಲಿ ನಿನಗೆ ಹಾಕೇನ [೨೧]

ಲೋರ್ಕಾ ಇಡೀ ಪರಂಪರೆಯನ್ನು ವ್ಯಂಗ್ಯ ಮಾಡಿ ಅದರ ನಿಯಂತ್ರಣವನ್ನು ಮುರಿಯುವ ಪ್ರಯತ್ನ ಮಾಡಿದ್ದಾನೆ.

ಎರ್ಮಾ :ಇವರಿಗೆ ಇನ್ನೂ ಅರ್ಥವಾಗದೇ ಇರೋದು ಏನೊಂದ್ರೆ
ನಾನು ಮನಸ್ಸು ಮಾಡಿದ್ರೆ ಇವರ ಈ ಇಡೀ ಸಂಸಾರವನ್ನೇ

ಶಾಶ್ವತವಾಗಿ ಗುಡಿಸಿ ಗುಂಡಾಂತರ ಮಾಡಿಬಿಡಬಲ್ಲೆ
ಅನ್ನೋದು [೨೨]

ಹೆಣ್ಣು ಸಹನೆ, ತಾಳ್ಮೆ, ಕರುಣೆಗೆ ಹೆಸರಾಗಿದ್ದಾಳೆ. ಇಂತಹ ಸಹನೆಯನ್ನು ನಾವು ಎರ್ಮಾಳಲ್ಲಿ ನೋಡಬಹುದು. ಆದರೆ ನಿರಾಶೆ ಎನ್ನುವುದು ಒಮ್ಮೆ ಕಟ್ಟೆಯೊಡೆಯಿತೆಂದರೆ ಅದನ್ನು ಮತ್ತೆ ತುಂಬಲು ಸಾಧ್ಯವೇ ಇಲ್ಲ ಎಂಬ ಪಾತ್ರವಾಗಿ ಎರ್ಮಾ ಚಿತ್ರಿತವಾಗಿದ್ದಾಳೆ.

ಕಂಬಾರರು ಗಂಡಿನ ಕ್ರೌರ್ಯವನ್ನು ಶಾರಿ, ಬಸ್ಸಿ ಹಾಗೂ ನಿಂಗಿಯ ಪಾತ್ರಗಳಿಂದ ಪ್ರಶ್ನಿಸುತ್ತಿದ್ದಾರೆ. ಇಲ್ಲಿ ಕೆಳವರ್ಗದ ಮಹಿಳೆಯರೇ ಹೆಚ್ಚಾಗಿ ಪುರುಷ ಪ್ರಧಾನತೆಯನ್ನು ಪ್ರತಿಭಟಿಸುವಂತೆ ಕಾಣುತ್ತಿದೆ. ಇಲ್ಲಿ ನಿಂಗಿ, ಬಸ್ಸಿ ಹಾಗೂ ಶಾರಿಯ ಪಾತ್ರಗಳೂ ಸ್ತ್ರೀವಾದಿ ಚಿಂತನೆಗಳಿಂದ ಹುಟ್ಟಿವೆ.

ಶಾರಿ ; ಗೌಡನ ಸೊಭಾವ ನಿನಗ ಇನ್ನೂ
ಗೊತ್ತ ಆಗಿಲ್ಲ, ಲೋಕದಾಗಿದ್ದದ್ದೆಲ್ಲಾ ತಂದ
ಆಗಬೇಕನ್ನೋದೊಂದ ಹಂಕಾರ ಬಿಟ್ಟರ ಅವನಲ್ಲಿ ಏನೈತಿ ॥ [೨೩]

ಇಲ್ಲಿ ಶಾರಿಯು ಗೌಡನ ಷಂಡತನವನ್ನು ಬಯಲು ಮಾಡುತ್ತಾಳೆ. ಗೌಡ್ತಿಗೆ ನಿಜ ಸ್ವರೂಪವನ್ನು ತಿಳಿಸಿ ಅವಳು ಪ್ರತಿಭಟಿಸುವಂತೆ ಮಾಡುತ್ತಾಳೆ. ಮೊದಲು ಅವಳು ಪುರುಷ ಸಂಕಥನ ಮೀರಲು ಹೆದರಿ ಬಸಣ್ಣನನ್ನು ನಿರಾಕರಿಸುತ್ತಾಳೆ.

ಗೌಡ್ತಿ :ಗಂಡುಳ್ಳ ಗರತಿ ನಾನಾ
ಹರಸೀಯೋ ಒಗತಾನಾ
ಪುಣ್ಯ ಪಾಪ ತಿಳಕೊಳ್ಳೊ ಹೈವಾನಾ ॥ [೨೪]

ಇವಳು ಪರಂಪರೆಯ ಹಿನ್ನೆಲೆಯಲ್ಲಿ ಪಾಪ ಪುಣ್ಯ ಎಂಬ ಮಾತುಗಳನ್ನು ಹೇಳುತ್ತಾಳೆ. ಮದುವೆಯಾದ ಹೆಂಗಸು ಪರಪುರುಷನೊಂದಿಗೆ ಬೆರೆಯಬಾರದು ಎಂಬ

ನಂಬಿಕೆಯನ್ನು ಹೊಂದಿದ್ದಾಳೆ. ಆದರೆ ಮುಂದೆ ಇದೇ ನಂಬಿಕೆಯನ್ನು ಮೀರಿ ನಡೆಯುತ್ತಾಳೆ. ಮದುವೆಯಾದ ಹೆಂಗಸರ ಬವಣೆಗಳನ್ನು ಲೋರ್ಕಾ ಎರ್ಮಾಳ ಮೂಲಕ ಹೇಳಿಸಿದ್ದಾನೆ.

ಎರ್ಮಾ : ಹೆಂಗಸರು ಮನೆಯಲ್ಲಿರಬೇಕು ಆದರೆ
ಜೀವಂತ ಹೂತಂತಲ್ಲ [28]

ಎರ್ಮಾಳ ಸ್ಥಿತಿಯು ಜೀವಂತ ಹೂತಂತಿದೆ. ಆದರೆ ಅವಳು ಅದನ್ನು ಪ್ರತಿಭಟಿಸುತ್ತಾಳೆ.

ಎರ್ಮಾ ಮತ್ತು ಗೌಡ್ತಿ ಸಾಮಾಜಿಕ ಕಟ್ಟಳೆಗಳನ್ನು ಮೀರಿ ನಡೆಯುತ್ತಾರೆ. ಮೇಲು ಜಾತಿಯ ಹೆಣ್ಣೊಬ್ಬಳು ಕೆಳಜಾತಿಗೆ ಸೇರಿದ ಮನೆಗೆ ಹೋಗಬಾರದು ಅದರಲ್ಲೂ ಸೂಳೆಯರ ಮನೆಯ ಬಾಗಿಲಿಗೆ ಹೋಗಲೇ ಬಾರದೆಂಬ ನಿಯಮಗಳನ್ನು ಪುರುಷ ಪ್ರಧಾನ ವ್ಯವಸ್ಥೆ ಏರಿತ್ತು. ಆ ಕಟ್ಟಳೆಯನ್ನು ಗೌಡ್ತಿ ಮುರಿಯುತ್ತಾಳೆ. ತನಗೆ ಬೇಕಾಗಿರುವುದನ್ನು ಅವಳು ಮುಕ್ತವಾಗಿಯೇ ಪಡೆಯುತ್ತಾಳೆ. ಅದೇ ರೀತಿ ಎರ್ಮಾ ಕೂಡ ಯುವಾನ್ ದೇವಸ್ಥಾನಕ್ಕೆ ಹೋಗಲೇ ಬಾರದೆಂಬ ಕಟ್ಟಳೆಯನ್ನು ಹೇರುತ್ತಾನೆ. ಆದರೆ ಎರ್ಮಾ ಅದನ್ನು ಧಿಕ್ಕರಿಸಿ ತನಗೆ ಬೇಕಾದುದನ್ನು ಪಡೆಯಲು ಹಂಬಲಿಸುತ್ತಾಳೆ. ಎರ್ಮಾಳ ಧೈರ್ಯವನ್ನು ಡೋಲೋರ್ಸ್ ಕೂಡ ಮೆಚ್ಚುತ್ತಾಳೆ.

ಡೋಲೋರ್ಸ್ :ನೀನು ನಿಜಕ್ಕೂ ಧೈರ್ಯವಂತೆ ಅನ್ನೋದ್ರಲ್ಲಿ
ಯಾವ ಅನುಮಾನವೂ ಇಲ್ಲ

ಮುದುಕಿ : ಏನಾದ್ರೂ ಬೇಕು ಅಂತ ಅನಿಸಿದ್ರೆ ನೀನು ಏನು ಬೇಕಾದ್ರು
ಮಾಡ್ತೀಯ [29]

ಆದರೆ ಇಷ್ಟು ಧೈರ್ಯವಂತ ಹೆಣ್ಣಾದರೂ ಕೂಡ ಅವಳನ್ನು ಪುರುಷ ಸಮಾಜ ಜಗತ್ತು ಮತ್ತೆ ಮತ್ತೆ ಶೋಷಣೆ ಮಾಡಿದಾಗ ಅವಳು ತನ್ನ ಆಸೆಯನ್ನು ಕೊಲ್ಲಲು ಯುವಾನ್‌ನನ್ನು ಕೊಲ್ಲುತ್ತಾಳೆ.

ಎರ್ಮಾ : ಹೌದು, ಅವನನ್ನು ನಾನು ಕೊಂದಿದ್ದೇನೆ
ನನ್ನ ಮಗುವನ್ನು ನಾನು ಕೊಂದಿದ್ದೇನೆ [೨೭]

ಆದರೆ ಜೋಕುಮಾರ ಸ್ವಾಮಿ ನಾಟಕದಲ್ಲಿ ಗೌಡ್ತಿ ತನ್ನ ಆಸೆ ಹಂಬಲವನ್ನು ಬಸಣ್ಣನ ಮೂಲಕ ಪಡೆಯುತ್ತಾಳೆ.

ಎರ್ಮಾ ಆಸೆ, ಭರವಸೆಗಳನ್ನು ಗಂಡಿನ ಧಮನ, ಅನುಮಾನಗಳನ್ನು ಸಹಿಸಲಾಗದೆ ತನ್ನ ಗಂಡನನ್ನೇ ಕೊಲ್ಲುವುದರ ಮೂಲಕ ಕೋಮಲ ಮನಸ್ಸಿನ ಹೆಣ್ಣು ಭಯಾನಕ ಹೆಜ್ಜೆ ಇರಿಸಿದ ಒಂದು ಘಟ್ಟ ಕಂಡು ಬರುತ್ತದೆ. ಇಲ್ಲಿ ಕಾಣುವುದು ಎರ್ಮಾ ಯುವಾನ್‌ನನ್ನು ಕೊಂದು ಏಕಾಂಗಿಯಾದರೂ ಸ್ವತಂತ್ರವಾದ ವ್ಯಕ್ತಿಯೆಂದು ಘೋಷಿಸಿಕೊಂಡಿದ್ದಾಳೆ.

''ಪ್ರೀತಿ ಮತ್ತು ಸೇಡಿನಲ್ಲಿ ಹೆಣ್ಣು ಗಂಡಿಗಿಂತ ಹೆಚ್ಚು ಬರ್ಬರಳಾಗಿರುತ್ತಾಳೆ'' - ಎಂಬ ನೀಶೆಯ ಮಾತನ್ನು ಎರ್ಮಾ ಈ ನಾಟಕದಲ್ಲಿ ಸಾಬೀತು ಪಡಿಸುತ್ತಾಳೆ.

ಅಡಿಟಿಪ್ಪಣಿಗಳು

೧. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೪

೨. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೪೨

೩. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೦.

೪. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೧೭

೫. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೧೬

೬. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೮.

೭. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೧೩

೯. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೦.

೯. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೧೪

೧೦. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೩೭

೧೧. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೧೯

೧೨. ಸ್ತ್ರೀವಾದ ಸಾಹಿತ್ಯ ವಿಮರ್ಶೆ : ತೇಜಸ್ವಿನಿ ನಿರಂಜನ, ಪುಟ-೨೩ ಸೀಮಂತಿನಿ ನಿರಂಜನ. ಇಲ್ಲಿ ಉಲ್ಲೇಖಿತ

೧೩. ಎರ್ಮಾ : ಎಸ್. ಗಂಗಾಧರಯ್ಯ, ಪುಟ ೧೪೯

೧೪. ಮಹಿಳೆ : ಬಿಡುಗಡೆಯ ಹಾದಿಯಲ್ಲಿ : ಎನ್. ಗಾಯತ್ರಿ , ಪುಟ ೧೨

೧೫. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೫೪

೧೬ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬೫

೧೭ ಮಹಿಳೆ: ಬಿಡುಗಡೆಯ ಹಾದಿಯಲ್ಲಿ : ಎನ್. ಗಾಯತ್ರಿ, ಪುಟ-೧೨.

೧೮ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೧೬

೧೯ ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೦.

೨೦. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೫೬

೨೧ ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೬೧.

೨೨. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೪೨

೨೩. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೩೬

೨೪ ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೫೭

೨೫. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೩೫

೨೬. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೪೮

೨೭. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬೯

# ಅಧ್ಯಾಯ -೪

## ತಾಯ್ತನದ ಪ್ರತಿನಿಧೀಕರಣ - ಎರಡೂ ನಾಟಕಗಳ ಹಿನ್ನೆಲೆಯಲ್ಲಿ

ನಮ್ಮ ಸಮಾಜವು ತಾಯ್ತನವನ್ನು ಅತಿಯಾಗಿ ವೈಭವೀಕರಿಸುತ್ತ ಅವಳನ್ನು ಪ್ರಕೃತಿ ಹಂತದಲ್ಲಿಯೇ ಪ್ರತಿನಿಧೀಕರಿಸಿದೆ. ತಾಯ್ತನವು ಕೌಟುಂಬಿಕ ಹಾಗೂ ಸಾಮಾಜಿಕ ಸ್ಥಾನಮಾನವನ್ನು ನೀಡಿ ಭದ್ರತೆಯ ಭಾವನೆಯನ್ನು ಮಹಿಳೆಯರಲ್ಲಿ ಮೂಡಿಸುತ್ತದೆ. ಹೆಣ್ಣು ತಾಯಿಯಾಗದಿದ್ದರೆ ಅವಳ ಬದುಕು ಪರಿಪೂರ್ಣವಲ್ಲ ಎಂಬ ಗಾಢವಾದ ನಂಬಿಕೆಯೂ ಸಮಾಜದಲ್ಲಿ ಬೆಳೆದು ಬಂದಿದೆ. ತಾಯಿಯನ್ನು ದೇವರೆಂದು ಗೌರವಿಸುವ ಪರಂಪರಾಗತ ಚಿಂತನೆಯು ಭಾರತೀಯರ ಜೀವನದ ಬಹುಮುಖ ಸ್ತರದಲ್ಲಿ ಬೇರೆ ಬೇರೆ ರೀತಿಯಿಂದ ಇಂದಿಗೂ ಕೆಲಸ ಮಾಡುತ್ತಿರುವುದನ್ನು ನಾವು ನೋಡಬಹುದಾಗಿದೆ.

ಅದರಲ್ಲೂ ನಮ್ಮ ಜನಪದರು ತಾಯ್ತನವನ್ನು ವಾಸ್ತವ ನೆಲೆಗಿಂತ ಉದಾತ್ತೀಕರಿಸಿ ನೋಡಿದ್ದಾರೆ. 'ಗಂಡಸಿಗೆ ತೆತ್ತಲ್ಲದೆ ಬುದ್ಧಿಯಿಲ್ಲ ಹೆಂಗಸಿಗೆ ಹೆತ್ತಲ್ಲದೆ ಬುದ್ಧಿ ಇಲ್ಲ'' ಎನ್ನುವ ಗಾದೆ ಹುಟ್ಟಿ ಹಾಕಿರುವುದನ್ನು ನೋಡಬಹುದು. 'ಬಂಜೆ ಸ್ತ್ರೀಯರನ್ನು ಸ್ವಾರ್ಥಿಗಳನ್ನಾಗಿ, ಕ್ರೂರಿಗಳನ್ನಾಗಿ, ಅಸೂಯೆ ಸ್ವಭಾವದವರನ್ನಾಗಿ, ಜೀವ ಭಿಕ್ಷುಕರನ್ನಾಗಿ ಹಾಗೂ ಅಸ್ಪೃಶ್ಯರನ್ನಾಗಿ ಪ್ರತಿನಿಧೀಕರಿಸಲಾಗಿದೆ. ಜೀವ ಸಂರಕ್ಷಕಿಯರು, ತ್ಯಾಗಿಗಳು ಜೀವ ಪ್ರೀತಿಯುಳ್ಳವರು, ಕರುಣಾಮಯಿಗಳು, ಸೃಜನಶೀಲರು ಹಾಗೂ ಕ್ಷಮಾಗುಣದವರೆಂದು ತಾಯಂದಿರನ್ನು ಪ್ರತಿನಿಧೀಕರಿಸಲಾಗಿದೆ.

ತಾಯ್ತನವು ಶ್ರೇಷ್ಠ ನೆಲೆಯಲ್ಲಿ ಬಂಜೆತನವು ಕನಿಷ್ಠ ಸ್ತರದಲ್ಲಿ ಪ್ರತಿನಿಧೀಕರಿಸಲ್ಪಟ್ಟಿರುವುದರಿಂದ ಮಹಿಳೆ ತಾಯ್ತನಕ್ಕಾಗಿ ಹಂಬಲಿಸುತ್ತಾಳೆ''[೧] ಇದನ್ನು ನೋಡಿದರೆ ಮಹಿಳೆಯು ಸಮಾಜದಲ್ಲಿ ತನಗೆ ಒಳ್ಳೆಯ ಸ್ಥಾನಕ್ಕೋಸ್ಕರ ಮಕ್ಕಳಿಗಾಗಿ ಹಂಬಲಿಸುತ್ತಾಳೆಂಬುದನ್ನು ನೋಡಬಹುದು.

ಬದಲಾಗುತ್ತಿರುವ ಸಾಮಾಜಿಕ ಸಂದರ್ಭಕ್ಕೆ ಅನುಗುಣವಾಗಿ ಕೆಲವು ಮುಖ್ಯ ಪ್ರಶ್ನೆಗಳನ್ನು ಸ್ತ್ರೀವಾದಿಗಳು ಎತ್ತಿದರು. ೨೦ನೇ ಶತಮಾನದ ಸ್ತ್ರೀವಾದಿ ಚಿಂತನೆಯು ಮಹಿಳೆಯ ತಾಯ್ತನದ ಪಾತ್ರವನ್ನು ಕೇಂದ್ರವಾಗಿಟ್ಟುಕೊಂಡು ಕೆಲ ಪ್ರಶ್ನೆಗಳನ್ನು ಎತ್ತಿತ್ತು.

ತಾಯ್ತನವನ್ನು ಮಹಿಳೆ ವಿಶೇಷ ವಲಯವೆಂದು ಭಾವಿಸುತ್ತ ಅದರ ಸಮಸ್ಯೆಗಳನ್ನು ಕಡೆಗಣಿಸಿದ ಅನೇಕ ತಾತ್ವಿಕ ಚಿಂತನೆಗಳ ಸಾಂಪ್ರದಾಯಿಕತೆಗಳನ್ನು ಸ್ತ್ರೀವಾದಿಗಳು ವಿರೋಧಿಸಿರುವುದನ್ನು ನಾವು ನೋಡಬಹುದು.

''ಎಲ್ಲಿಯವರೆಗೆ ಮಹಿಳೆ ಮಗುವನ್ನು ಹೆರುತ್ತಾ ಇರುತ್ತಾಳೋ ಅಲ್ಲಿಯವರೆಗೆ ಆಕೆ ಅನಿವಾರ್ಯ ಹಿಂಸೆ ಹಾಗೂ ದಮನಕ್ಕೆ ಒಳಗಾಗುತ್ತಾಳೆ. ಗರ್ಭಧಾರಣೆಯ ಅಗತ್ಯವಿಲ್ಲದೆ, ಅನ್ಯ ಮಾರ್ಗಗಳಿಂದ ಹಾಗೂ ಹೊಸ ರೀತಿಯ ಸಾಮೂಹಿಕ ಬದುಕಿನ ಮೂಲಕ ತಾಯ್ತನದ ಸಿದ್ಧಪಾತ್ರವನ್ನುಮಹಿಳೆ ಮೀರಬಹುದು''[೨] ಎಂದು ಶುಲಾಯಿತ್ ಫೈರ್‌ಸ್ಟೋನಳು ವಾದಿಸಿದ್ದಾಳೆ. ಆದರೂ ಈಗಲೂ ಬಹಳಷ್ಟು ಹೆಣ್ಣು ಮಕ್ಕಳು ಏನೇ ಒತ್ತಡಗಳಿದ್ದರೂ ಈ ವೈವಾಹಿಕತೆಯನ್ನು ಹಾಗೂ ತಾಯ್ತನವನ್ನು ಹಂಬಲಿಸುವುದನ್ನು ನಾವು ನೋಡಬಹುದು.

ಲೋರ್ಕಾರ ಎರ್ಮಾ ಮತ್ತು ಕಂಬಾರರ ಜೋಕುಮಾರಸ್ವಾಮಿ ನಾಟಕಗಳಲ್ಲಿ ತಾಯ್ತನದ ಹಂಬಲಕ್ಕಾಗಿ ಹಾತೊರೆಯುವ ಹೆಣ್ಣುಗಳಾಗಿ ಎರ್ಮಾ ಮತ್ತು ಗೌಡ್ತಿ ಕಂಡು ಬರುತ್ತಾರೆ. ಮಕ್ಕಳಿಲ್ಲದಿದ್ದರೆ ಬದುಕೇ ನಶ್ವರ ಎಂಬ ಧೋರಣೆಯನ್ನು ಹೊಂದಿದವರಾಗಿದ್ದಾರೆ.

ಎರ್ಮಾ : ಮಕ್ಕಳಿರದವರ ಬಾಳು ದೇವರಿಗೆ ಬೇಡದ ತಿಪ್ಪೆಗೆ
ಬಿಸಾಡುವಂಥ ದತ್ತೂರಿಯ ಗೊಂಚಲಿದ್ದಂತೆ[೩]

ಮಕ್ಕಳನ್ನು ಹೆರಬೇಕು ಅನ್ನೋದು ಹೆಂಗಸಿನ ಸಹಜವಾದದ್ದು. ಮಕ್ಕಳಾಗದಿದ್ದರೆ ಬದುಕು ಹೇಗೆ ಬರುತ್ತದೋ ಹಾಗೆ ಸ್ವೀಕರಿಸಬೇಕು. ಆದರೆ ಎರ್ಮಾಳ ಮನೋವೇದನೆ ಹೇಗಿದೆ ಎಂದರೆ ತಾಯಿಯಾಗದಿದ್ದಲ್ಲಿ ಬದುಕು ಪರಿಪೂರ್ಣವಲ್ಲ ಎಂಬ ಧಾರ್ಮಿಕ ನಂಬಿಕೆಯಿಂದ ಕೂಡಿದೆ. ತನ್ನ ಜೀವನವನ್ನು ಯಾವುದೇ ಉಪಯೋಗಕ್ಕೆ ಬಾರದ ಒಂದು ವಸ್ತುವಿನ ರೀತಿ ನೋಡುತ್ತಾಳೆ. ಇದೇ ರೀತಿ ಮನೋಧೋರಣೆಯನ್ನು ಗೌಡ್ತಿಯಲ್ಲೂ ನೋಡಬಹುದು.

ಗೌಡ್ತಿ : ಬೇಡಿ ಬಂದೀ ಬಾ, ಸೆರಗೊಡ್ಡಿದರ ಶಿವಾ ನನ್ನ ಉಡ್ಯಾಗ
ಕಸಬರಿಗಿ ಹಾಕಿ ಕಳಿಸ್ಯಾನ [೪]

ಎರ್ಮಾ ತನ್ನ ಜೀವನವನ್ನು ಬಿಸಾಕುವ ದತ್ತೂರಿ ಗೊಂಚಲಿಗೆ ಹೋಲಿಸಿ ಕೊಂಡರೆ ಗೌಡ್ತಿ ಒಂದು ಕಸದ ಪೊರಕೆಗೆ ಹೋಲಿಸಿಕೊಂಡಿದ್ದಾಳೆ. ಅಂದರೆ ಹೆಣ್ಣು ತಾಯಿಯಾಗದಿದ್ದರೆ ಸಮಾಜದಿಂದ ತಿರಸ್ಕೃತಳಾಗುತ್ತಾಳೆ. ಹಾಗೂ ತಮ್ಮ ಜೀವನ ಪರಿಪೂರ್ಣವಲ್ಲ ಎಂದು ಇವರು ನಂಬಿದ್ದಾರೆ.

ಈ ಸಮಾಜ ಬಂಜೆ ಹೆಣ್ಣುಗಳನ್ನು ನಡೆಸಿಕೊಳ್ಳುವ ರೀತಿ ಊಹೆಗೂ ನಿಲುಕದ್ದು. ಒಂದು ಪಶುವಿನ ರೀತಿ ನೋಡುತ್ತಾರೆ. ಹಾಗೂ ವಿವಿಧ ರೀತಿ ಅವಾಚ್ಯ ಶಬ್ಧಗಳಿಂದ ಅವರನ್ನು ನಿಂದಿಸುತ್ತಾರೆ. ಇದೇ ರೀತಿ ಶೋಷಣೆಗೆ ಎರ್ಮಾ ಮತ್ತು ಗೌಡ್ತಿ ಒಳಗಾಗುತ್ತಾರೆ.

ಎರ್ಮಾ ನಾಟಕದಲ್ಲಿ ಆದಿವಾಸಿ ಹೆಂಗಸು ಎರ್ಮಾಳನ್ನು ಇದೇ ರೀತಿ ಹಿಂಸಿಸುತ್ತಾಳೆ.

ಆ.ಹೆಂ : ಹಾಗಿದ್ರೆ ನಿನ್ನ ಹಣೆ ಪಾಡು ನಿನಗೆ, ಹಾಳಾಗಿ
ಹೋಗು ಬಂಜೆ ಹೆಣ್ಣು ಒಣಗಿದ ದತ್ತೂರಿ ಹೂ
ಗೊಂಚಲಿದ್ದಂತೆ [೫]

ಜೋಕುಮಾರ ಸ್ವಾಮಿ ನಾಟಕದಲ್ಲಿ ಗೌಡ್ತಿಯನ್ನು ಕುರಿತು ನಿಂಗಿ ಹೇಳುವ

ಅಡವಿ ತುಂಬ ಹೊಲಾ, ಊರ ತುಂಬ ಮನೀ ಇದ್ದ,
ಮನ್ಯಾಗೊಂದ ಕೂಸಿಲ್ಲಾ ಕುನ್ನಿಲ್ಲಾ..... [೬]

ಎನ್ನುವ ಮಾತು ಗೌಡ್ತಿಯನ್ನು ಹಿಂಸಿಸುವಂತೆ ಇದೆ. ಗೌಡ್ತಿ ಮತ್ತು ಎರ್ಮಾ ಮೊದಲೇ ತಮ್ಮ ಗಂಡಂದಿರಿಂದ ದಮನಗೊಂಡಿದ್ದಾರೆ. ಈ ಸಮಾಜವು ಕೂಡ ಅವರನ್ನು ಶೋಷಣೆಗೊಳಪಡಿಸುತ್ತದೆ. ಇಲ್ಲಿ ಇವರನ್ನು ಹಿಂಸಿಸುವವರು ಹೆಣ್ಣುಗಳೇ ಆಗಿದ್ದಾರೆ. ಈ ಬಂಜೆ ಸ್ಥಿತಿಯನ್ನು ಅರ್ಥಮಾಡಿಕೊಳ್ಳದ ಸ್ತ್ರೀ ಜಗತ್ತು ಇಲ್ಲಿರುವುದನ್ನು ನಾವು ಕಾಣಬಹುದು. ಹೆಣ್ಣಿನ ಮನಸ್ಸಿನ ಭಾವನೆಗಳನ್ನು ಹೆಣ್ಣು ಮಾತ್ರವೇ ಚೆನ್ನಾಗಿ ತಿಳಿದುಕೊಳ್ಳಬಲ್ಲಳು ಎಂಬ ಭಾವ ಇಲ್ಲಿ ಬುಡ ಮೇಲಾಗುತ್ತದೆ.

ಗೌಡ್ತಿ ಮತ್ತು ಎರ್ಮಾ ತಾಯ್ತನದ ಹಂಬಲವನ್ನು ತಮ್ಮ ಗಂಡಂದಿರಿಗೆ ತಿಳಿಸಿದರೂ ಕೂಡ ಇವರ ಆಸೆ ಬಯಕೆಗಳನ್ನು ತಿರಸ್ಕರಿಸುತ್ತಾರೆ. ಆದರೆ ಮಕ್ಕಳನ್ನು ಪಡೆಯುವುದೇ ತಮ್ಮ ಸರ್ವಸ್ವ ಎಂದು ಗೌಡನನ್ನು ಹಾಗೂ ಯುವಾನ್‌ನನ್ನು ನಿವೇದಿಸಿಕೊಳ್ಳುತ್ತಾರೆ.

ಎರ್ಮಾ : ನೀನು ಬಿಟ್ಟಿರಬಹುದು - ನಾನಲ್ಲ. ನಿಮಗೆ, ಗಂಡಸರಿಗೆ
ಹತ್ತು ಹಲವು ದಾರಿಗಳಿವೆ ಆದರೆ ನಮಗೆ ? ಈ ಹೆಂಗಸರ
ಸರ್ವಸ್ವ ಮಕ್ಕಳನ್ನು ಹೆರೋದು, ಅವನ್ನ ಬೆಳೆಸೋದು,
ಅದಿಲ್ಲದೆ ನಾವಿಲ್ಲಿ ಏನೇನೂ ಅಲ್ಲ. [೭]

ಹೆಣ್ಣಿನ ಬದುಕಿಗೆ ಅರ್ಥವಿರುವುದು ತಾಯ್ತನದಿಂದಲೇ ಅದು ಇಲ್ಲದಿದ್ದರೆ ಆ ಬದುಕು ನಿಷ್ಪ್ರಯೋಜಕ ಎಂಬ ಧೋರಣೆಯಲ್ಲಿ ಎರ್ಮಾ ಇದ್ದಾಳೆ. ಇವಳು ಯುವಾನ್ ಹೇಳುವ ಹಾಗೆ ಬೇರೆಯವರ ಮಕ್ಕಳನ್ನು ತನ್ನ ಮಕ್ಕಳಂತೆ ಬೆಳೆಸಲು ಒಪ್ಪಳು

ಎರ್ಮಾ ಬೇರೆಯವರ ಮಗೂನಾ ? ನನ್ನ ತೋಳುಗಳು ಮರಗಟ್ಟಿಬಿಡ್ತವೆ [೮]

ಬ್ರೆಕ್ಟ್‌ನ ಕಕೇಷಿಯನ್ ಚಾಕ್ ಸರ್ಕಲ್ ನಾಟಕದಲ್ಲಿ ಗ್ರೂಷಾ ಮದುವೆಯಾಗಿಲ್ಲದಿದ್ದರೂ ಬೇರೆಯವರ ಮಗುವನ್ನು ತನ್ನ ಮಗುವಿನ ರೀತಿ ಬೆಳೆಸುತ್ತಾಳೆ. ಆ ಮಗುವಿನಿಂದ ಎಷ್ಟೇ ಕಷ್ಟಗಳು ಬಂದರೂ ಕೂಡ ಅದನ್ನು ಸಹಿಸಿಕೊಂಡು ವಿಶಿಷ್ಟವಾದ ತಾಯ್ತನಕ್ಕೆ ಹೆಜ್ಜೆಯಿಡುತ್ತಾಳೆ.

ಆದರೆ ಎರ್ಮಾ ಇರುವ ಸ್ಥಿತಿಯನ್ನು ಬಂದ ಹಾಗೆ ಸ್ವೀಕರಿಸುವ ಸಾಧಾರಣ ಹೆಂಗಸಲ್ಲ. ಈ ಬದುಕಿನಲ್ಲಿ ಇನ್ನೇನೋ ಸೃಷ್ಟಿಸಲು ಪ್ರಯತ್ನ ಮಾಡುತ್ತಾಳೆ. ವಿಶಿಷ್ಟ ಅಸ್ತಿತ್ವಕ್ಕಾಗಿ ಚಡಪಡಿಸುತ್ತಿರುವ ಹೆಣ್ಣಾಗಿ ಕಂಡುಬರುತ್ತಾಳೆ.

ಗೌಡ್ತಿ ತಾಯ್ತನಕ್ಕಾಗಿ ಗೌಡನನ್ನು ಎಷ್ಟೇ ನಿವೇದಿಸಿ ಕೊಂಡರೂ ಅವನು ಒಂದು ರೀತಿಯ ನಿರ್ಲಕ್ಷ್ಯತನದಿಂದ ಮಾತನಾಡುತ್ತಾನೆ. ಈ ಸಮಾಜವು ಬಂಜೆಯಾದ ಹೆಣ್ಣಿಗೆ ಅನೇಕ ತಾತ್ಸಾರದ ಮಾತುಗಳನ್ನಾಡುತ್ತದೆ. ಆದರೆ ಗಂಡಿನಲ್ಲಿರುವ ಲೋಪ-ದೋಷಗಳನ್ನು ಎತ್ತಿ ಹಿಡಿಯುವುದೇ ಇಲ್ಲ. ಮಕ್ಕಳಾಗದೇ ಇರುವುದಕ್ಕೆ ಗಂಡಿನಲ್ಲಿಯೂ ಕೆಲವು ನ್ಯೂನತೆಗಳಿರುತ್ತವೆಂದು ಮನಗಂಡಿದ್ದರೂ ಸಹ ಹೆಣ್ಣನ್ನೇ ಕೇಂದ್ರವಾಗಿಟ್ಟುಕೊಂಡು ದೂಷಿಸುತ್ತದೆ.

ವಾಸ್ತವವಾಗಿ ತಾಯ್ತನದ ಅನುಭವವಿಲ್ಲದಿದ್ದರೂ ಬೇರೆಯವರ ಅನುಭವಗಳನ್ನು ಎರ್ಮಾ ತನ್ನದಾಗಿಸಿಕೊಂಡು ಮಾತನಾಡುತ್ತಾಳೆ. ಈಗಾಗಲೇ ಬಸಿರಾಗಿರುವ ತನ್ನ ಗೆಳತಿಯಿಂದ ಆ ಅನುಭವಗಳನ್ನು ಕೇಳಿ ತಿಳಿಯುತ್ತಾಳೆ.

ಎರ್ಮಾ - ಗಾಬರಿ ನಿನಗೆ ಅದು ಮೊದಲು
ಗೊತ್ತಾದದ್ದು ಯಾವಾಗ? ಅದರ ಬಗ್ಗೆ ಹೇಳು...

ಮರಿಯ : ಓಹ್ ನನಗದು ಗೊತ್ತಿಲ್ಲ. ಜೀವ ಇರೋ ಹಕ್ಕಿನ ನೀನು
ಎಂದಾದರೂ ಕೈಯಲ್ಲಿ ಹಿಡುಕೊಂಡಿದ್ದೀಯೇನು?...[೯]

ಎರ್ಮಾಳಲ್ಲಿ ತಾಯ್ತನಕ್ಕಾಗಿ ಎಷ್ಟೇ ಕಷ್ಟಬಂದರೂ ಸಹಿಸಿಕೊಳ್ಳಲು ಸಿದ್ಧವಾಗಿ ಮಗುವಿಗಾಗಿ ಹಂಬಲಿಸುವ ತೀವ್ರ ತುಡಿತ ಕಾಣುತ್ತದೆ. ಆ ಮಗು ಆಡಿಕೊಂಡು ಬೆಳೆಯುವಾಗ ತಾನು ಆ ನೋವನ್ನು ಮರೆಯುತ್ತೇನೆಂಬ ಹಂಬಲವನ್ನು ಅವಳಲ್ಲಿ ನೋಡಬಹುದು. ಯಾವುದೇ ಸಂಸ್ಕೃತಿಯಲ್ಲಿ ತಾಯ್ತನದ ಪ್ರತಿಮೆಯು ಪ್ರಧಾನವಾಗಿ ಬಿಂಬಿತವಾಗುತ್ತಿದೆಯೇ ಹೊರತು ಅದರ ಅತಿ ಕಷ್ಟದ ಜವಾಬ್ದಾರಿಯ ನಿರ್ವಹಣೆಯ ಬಗೆಗೆ ಯಾರು ತಲೆಗೆಡಿಸಿಕೊಳ್ಳುವುದಲ್ಲ ಎಂಬುದಕ್ಕೆ ಸಾಕ್ಷಿಯಾಗಿ ಎರ್ಮಾ ಇದ್ದಾಳೆ.

ಎರ್ಮಾ : ನನ್ನ ಅಕ್ಕ, ಮಗುವಿಗೆ ಹಾಲು ಕುಡಿಸುವಾಗ, ಅವಳ ಮೊಲೆಗಳ ತುಂಬಾ ಪರಚಿದ ಕಲೆಗಳಿರುವುದನ್ನು ಕಂಡಿದ್ದೇನೆ. ನಿಜಕ್ಕೂ ನೋವಾಗುತ್ತೆ. ಆದರೆ ಆ ನೋವಿನೊಳಗೂ ಎಂಥದೋ ಸುಖವಿರುತ್ತೆ.[೧೦]

ತಾಯ್ತನ ಹೆಣ್ಣಿಗೆ ಅನಿವಾರ್ಯವೆಂಬುದು ವ್ಯವಸ್ಥೆ ರೂಪಿಸಿದ ಮೌಲ್ಯ. ಈ ಮೌಲ್ಯವೇ ತಮ್ಮ ಕರ್ತವ್ಯವೆಂದು ಅನೇಕ ಹೆಂಗಸರು ಭಾವಿಸಿದ್ದಾರೆ. ಅದನ್ನು ಅಲ್ಲಗೆಳೆಯುವುದಕ್ಕೆ ಆಸ್ಪದಕೊಡದ ಹಾಗೆ ಈ ವ್ಯವಸ್ಥೆ ತಾಯ್ತನವನ್ನು ವೈಭವೀಕರಿಸಿದೆ. ಈ ವೈಭವೀಕರಣ ಎರ್ಮಾ ಮತ್ತು ಗೌಡ್ತಿಯರಿಬ್ಬರಲ್ಲೂ ಗಾಢವಾದ ಪ್ರಭಾವ ಬೀರಿರುವುದನ್ನು ನಾವು ನೋಡಬಹುದು. ಎರ್ಮಾ ತನ್ನ ಸುತ್ತಮುತ್ತ ಬದುಕುತ್ತಿರುವ ತಾಯಂದಿರನ್ನು ಗಮನಿಸಿ ಅವರ ಅನುಭವಗಳನ್ನು ತನ್ನ ಸ್ವಂತದ್ದೆಂದು ಭಾವಿಸಿ

ತಾಯ್ತನದಲ್ಲಿರುವ ಸುಖದ ಬಗ್ಗೆ ತುಂಬಾ ಗೊತ್ತಿರುವಂತೆ ಮಾತನಾಡುತ್ತಾಳೆ. ಮೂರ್ತವಾಗಿ ಅಲ್ಲದಿದ್ದರೂ ಅಮೂರ್ತವಾಗಿ ತಾಯ್ತನದ ಸುಖವನ್ನು ಮೈಗೂಡಿಸಿಕೊಂಡಿದ್ದಾಳೆ.

ಒಬ್ಬ ಗಂಡಸಿನ ಪತ್ನಿಯಾಗಿರುವುದಕ್ಕಿಂತಲೂ ಹೆಚ್ಚಿನ ಸ್ತ್ರೀಯಾತ್ಮಕ ಗುರುತನ್ನು ತಾಯಿಯಾಗಿ ಹೆಣ್ಣು ಪಡೆಯುತ್ತಾಳೆ. ಮಕ್ಕಳನ್ನು ಹೆತ್ತು ಪಾಲನೆ ಮಾಡುವುದು ಸಾಮಾಜಿಕವಾಗಿ ಹೆಚ್ಚು ಬೆಲೆಯುಳ್ಳದ್ದೆಂದು ನಂಬಿದ್ದಾರೆ. ಗಂಡಸು ಹೊರಗೆ ದುಡಿದು ತನ್ನ ವೃತ್ತಿಯಲ್ಲಿ ಯಶಸ್ಸನ್ನು ಪಡೆಯುವುದರ ಮೂಲಕ ಕುಟುಂಬಕ್ಕೆ ಬದ್ಧನಾಗಿ ನಡೆಯಬೇಕು, ಮಹಿಳೆಯು ತಾಯಿಯಾಗಿ ಗೃಹಕೃತ್ಯಗಳಲ್ಲಿ ತೊಡಗಿ ಕೌಟುಂಬಿಕ ಬದ್ಧತೆಯನ್ನು ನಿಭಾಯಿಸಬೇಕೆಂಬ ಕಟ್ಟಳೆಯನ್ನು ಅಂದಿನ ಸಮಾಜವು ಹೇರಿತ್ತು. ಇದೇ ರೀತಿಯ ಬದ್ಧತೆಗೆ ಎರ್ಮಾ ಮತ್ತು ಗೌಡ್ತಿ ಒಳಗಾಗಿದ್ದಾರೆ. ಆದರೆ ತಾಯ್ತನದ ಹಂಬಲವಿರುವ ಹೆಣ್ಣಿನ ಹಂಬಲವೇನು ಎಂದು ತಿಳಿದುಕೊಳ್ಳದ ಗಂಡಂದಿರಿದ್ದಾರೆ. ಇವರಿಗೆ ಹೊರಗಿನ ಕೆಲಸವೇ ಹೆಚ್ಚು. ಹೆಂಡತಿಯರ ತಳಮಳವನ್ನು ತಿಳಿದುಕೊಳ್ಳಲು ಸಹ ಸಮಯವಿಲ್ಲ. ಹಾಗೂ ಮಕ್ಕಳಿರದ ಜೀವನವೇ ಸೊಗಸಾಗಿರುತ್ತದೆ ಎಂದು ನಂಬಿದವರಾಗಿದ್ದಾರೆ.

ಮಾನವನ ನಿರಂತರ ಆಧೀಮ ಅಗತ್ಯವೇ ಅವನನ್ನು ನಿರಾಶೆಗೆ ತಳ್ಳುವುದನ್ನು ಕಾಣಬಹುದು. ಲೋರ್ಕಾನು ಸೃಷ್ಟಿಸಿರುವ ಎರ್ಮಾಳಲ್ಲಿ ನಾವು ವಿಚಿತ್ರ ದಾಹವನ್ನು, ಸಾಂಪ್ರದಾಯಿಕ ಸ್ತ್ರೀ ಚಿತ್ರಣದಲ್ಲಿ ಕಾಣದ ಆದರೆ , ಹೆಣ್ಣಿನಲ್ಲಿ ನಿಜವಾಗಿ ಇರುವ ಸ್ಥಿತಿಯನ್ನು ಕಾಣುತ್ತೇವೆ.

ಎರ್ಮಾ : ಪ್ರತಿ ಹೆಣ್ಣಿನಲ್ಲೂ ನಾಲ್ಕು ಅಥವಾ ಐದುಮಕ್ಕಳಿಗೆ ಆಗುವಷ್ಟು
ರಕ್ತವಿರುತ್ತೆ
ಅವನ್ನು ಹೆರದೇಹೋದಲ್ಲಿ ಅದು ಪೂರಾ ವಿಷವಾಗಿ ಬಿಡುತ್ತೆ
ಈಗ ನನಗೆ ಆಗ್ತಿರೋದು ಅದೇ[೧೧]

ಕಂಬಾರರಿಗಿಂತ ಲೋರ್ಕಾ ತಾಯ್ತನದ ಅನುಭವವನ್ನು ಚೆನ್ನಾಗಿ ಗ್ರಹಿಸಿ ವ್ಯಕ್ತಪಡಿಸಿದ್ದಾನೆ.

ಗೌಡ್ತಿ : ಎಷ್ಟ ಸಲ ಹೇಳೇನಿ. ಈ ಮನೀಗಿ ಮಕ್ಕಳ ಬೇಕೋ ಗೌಡ
ಅಂತ ಹೇಳಿದಾಗೊಮ್ಮಿ ದಣಿದೀದಿ ಆರಾಮು ತಗೋ
ಹೋಗಂತಾನ [೧೨]

ಇದೇ ರೀತಿಯ ಧೋರಣೆಯನ್ನು ಎರ್ಮಾ ನಾಟಕದಲ್ಲಿ ಯುವಾನ್ ಹೊಂದಿದ್ದಾನೆ.

ಯುವಾನ್ : ಮಕ್ಕಳಿಲ್ಲದ ಬದುಕು ತುಂಬಾ ನಿಸೂರು ನಾನು
ಇಷ್ಟಪಡೋದು ಅದನ್ನೇ [೧೩]

ಗೌಡ್ತಿ ಹಾಗೂ ಎರ್ಮಾ ತಾಯ್ತನಕ್ಕಾಗಿ ಹಂಬಲಿಸಿದರೂ ತಮ್ಮ ಗಂಡಂದಿರನ್ನು ಎಷ್ಟೇ ನಿವೇದಿಸಿಕೊಂಡರೂ ಅದು ಸಾಧ್ಯವಾಗದಿದ್ದಾಗ ಅವರಿಬ್ಬರೂ ದೇವರ ಮೊರೆ ಹೋಗುವುದನ್ನು ನಾವು ನೋಡಬಹುದು. ಮಕ್ಕಳಾಗದಿದ್ದರೆ ಅದಕ್ಕೆ ಸ್ತ್ರೀಯನ್ನೇ ಈ ಸಮಾಜ ಹೊಣೆಗಾರನ್ನಾಗಿಸುತ್ತದೆ. ಈ ಸಮಾಜಕ್ಕೆ ಹೆದರಿ ಹೆಣ್ಣು ಯಾವುದೇ ಕಷ್ಟದ ಕೆಲಸಕ್ಕೂ ಸಿದ್ಧಳಾಗುತ್ತಾಳೆ.

ಗೌಡ್ತಿ : ಈ ಪೂಜೆ ಬರೋಬರಿ ಅದರ ಮಕ್ಕಳಾದಾವೇನ [೧೪]

ಇದೇ ರೀತಿ ಎರ್ಮಾಳು ಕೂಡ ದೇವರ ಮೊರೆಗೆ ಹೋಗುವುದನ್ನು ನೋಡಬಹುದು.

ಎರ್ಮಾ : ನಾನು ಬಂದ ಕೆಲಸ ಹಣ್ಣಾಗಬೇಕು. ನೀನು ಧೋಕ ಅಲ್ಲ
ಅಂತ ನಾನು ನಂಬಿದೀನಿ [೧೫]

ದೈವವನ್ನು ನಂಬಿಯೂ ಎರ್ಮಾಳಿಗೆ ನಿರಾಶೆಯಾಗುವುದನ್ನು ಈ ನಾಟಕದಲ್ಲಿ ನೋಡಬಹುದು. ಆದರೆ ಕೊನೆಗೆ ಮಕ್ಕಳನ್ನು ಪಡೆಯಲು ದೇವರ ನಂಬಿಕೆಯಿಂದ ಸಾಧ್ಯವಿಲ್ಲ. ಅದಕ್ಕೆ ಗಂಡಿನ ಸಂಬಂಧ ಬೇಕೇ ಬೇಕು ಎಂಬ ಸತ್ಯವನ್ನು ಮಂಡಿಸುವುದರ ಮೂಲಕ ಲೋರ್ಕಾ ಆಧುನಿಕ ಸಂವೇದನೆಯನ್ನುತಂದಿದ್ದಾನೆ.

ಆದರೆ ಕಂಬಾರರು ಈ ನಾಟಕದಲ್ಲಿದೈವವನ್ನು ನಂಬುವುದರ ಮೂಲಕ ಪರಂಪರಗೆ ಶರಣಾಗಿರುವುದನ್ನು ನಾವು ನೋಡಬಹುದು.

ಬಸಣ್ಣ : ಬಂದ ಜೋಕುಮಾರಸ್ವಾಮಿಯ ಪಲ್ಲೇವ
ಉಣಿಸಿದಿ ಬಿಟ್ಟೇನು ನೀ ನೀಡಿದ್ದ ಉಂಡಮ್ಯಾಲಽ
ಅಲ್ಲೇನ ಇಷ್ಟೆಲ್ಲಾ ಗರ್ದಿಗಮ್ಮತ್ ಆದದ್ದ ?[೧೬]

ಗೌಡ್ತಿಯು ಮೊದಲು ನೈತಿಕ ಮಾತುಗಳನ್ನಾಡಿದರೂ ಕೊನೆಗೆ ಬಸಣ್ಯನೊಂದಿಗೆ ಅನೈತಿಕ ಸಂಬಂಧ ಹೊಂದಲು ಮುಂದಾಗುತ್ತಾಳೆ. ಇವಳು ಕೊನೆಗೂ ತನ್ನ ತಾಯ್ತನದ ಬಯಕೆಯನ್ನು ಇವನಿಂದ ಈಡೇರಿಸಿಕೊಳ್ಳುತ್ತಾಳೆ.

ಆದರೆ ಎರ್ರಾ ತಾಯ್ತನದ ಹಂಬಲ ತೀವ್ರವಾಗಿದ್ದರೂ ಕೊನೆಗೆ ಅವಳಿಗೆ ನಿರಾಶೆಯಾಗುತ್ತದೆ. ಅವಳು ತನ್ನ ಬಯಕೆಯನ್ನು ಕೊಲ್ಲುವುದಕ್ಕೋಸ್ಕರ ತನ್ನ ಗಂಡನನ್ನೇ ಕೊಲ್ಲುತ್ತಾಳೆ. ಕೊನೆಗೂ ಅವಳು ಬಂಜೆಯಾಗಿಯೇ ಉಳಿಯುತ್ತಾಳೆ.

ಎರ್ರಾ : ಬಂಜೆ, ಹೌದು ನಾನು ಬಂಜೆ, ಇನ್ನು ಎಂದೆಂದಿಗೂ ನಾನು
ಏಕಾಂಕಿ, ಈಗದು ನಿಜವಾಗಿ ಹೋಯ್ತು, [೧೭]

ಎರ್ರಾಳಿಗೆ ಬಂಜೆತನದಿಂದ ವಿಮೋಚನೆ ಪಡೆಯುವುದು ಪ್ರಧಾನ ಉದ್ದೇಶವಾಗಿತ್ತೆ ಹೊರತು ಪಾತಿವ್ರತ್ಯದ ಚೌಕಟ್ಟನ್ನು ಮೀರುವುದಾಗಿರಲಿಲ್ಲ. ಆದರೆ ಗೌಡ್ತಿಗೆ ಕಾಮವೂ ಮುಖ್ಯವಾಗಿ ಬಸಣ್ಣನೊಡನೆ ಸೇರಿ ತನ್ನ ಕಾಮದ ಬಯಕೆ ಹಾಗೂ ತಾಯ್ತನದ ಬಯಕೆಗಳೆರಡನ್ನು ಈಡೇರಿಸಿಕೊಳ್ಳುತ್ತಾಳೆ.

## ೧. ಎರ್ಮಾ ಮತ್ತು ಜೋಕುಮಾರಸ್ವಾಮಿ ನಾಟಕಗಳಲ್ಲಿ ವ್ಯಕ್ತವಾಗುವ ಕನಸು ಹಾಗೂ ಸ್ವಗತದ ಕಲ್ಪನೆ

ಸ್ವಗತದ ಪರಿಕಲ್ಪನೆಯನ್ನು ನಾವು ಮೊದಲು ಗ್ರೀಕ್ ದುರಂತ ನಾಟಕಗಳಲ್ಲಿ ನೋಡಬಹುದು. ಸ್ವಗತ ಎಂದರೆ ತನಗೆ ತಾನೇ ಮಾತನಾಡಿಕೊಳ್ಳುವುದು ಎಂಬ ಅರ್ಥವಿದೆ. ಅಂದರೆ ಮನಸ್ಸಿನಲ್ಲಿ ಹುದುಗಿರುವ ನೆನಪುಗಳನ್ನು ಹೇಳಿಕೊಳ್ಳುವುದು ಲೇಖಕ ಒಂದು ಕೃತಿಯ ಪಾತ್ರದಲ್ಲಿ ಸ್ವಗತದ ಕಲ್ಪನೆಯನ್ನು ಬಳಸುವುದು ಆ ಪಾತ್ರದ ಸಂವೇದನೆಯನ್ನು ಪರಿಣಾಮಕಾರಿಯಾಗಿ ಮಂಡಿಸುವುದಕ್ಕೆ ಆಗಿದೆ.

ಈ ಸ್ವಗತದ ಭಾಷೆಯು ಕನಸಿನಲ್ಲಿ ಹಾಗೂ ಪ್ರಜ್ಞೆಯಲ್ಲಿ ಕಾಣುತ್ತದೆ. ಇದರ ಬಗ್ಗೆ ಯೂಂಗ್ ''ಸ್ವಪ್ನಗಳ ಹಿಂದೆ ಹತ್ತಿಕ್ಕಿಕೊಂಡಿದ್ದ ಆಸೆಗಳ ಅಭಿವ್ಯಕ್ತವಾಗಬಹುದು ಅಥವಾ ಇಂದಿನ ಘರ್ಷಣೆಯ ಸೂಚಕವಾಗಬಹುದು ಅಥವಾ ಮುಂದಾಗುವುದರ ಮುನ್ಸೂಚನೆಯೂ ಆಗಿರಬಹುದು'' [೧೮] ಎಂದಿದ್ದಾನೆ.

ಲೋರ್ಕಾರ 'ಎರ್ಮಾ' ಹಾಗೂ ಕಂಬಾರರ 'ಜೋಕುಮಾರ ಸ್ವಾಮಿ' ನಾಟಕಗಳಲ್ಲಿ ಎರ್ಮಾ ಹಾಗೂ ಗೌಡ್ತಿಯರಲ್ಲಿ ಸ್ವಗತ ಮತ್ತು ಕನಸಿನಲ್ಲಿ ಹುದುಗಿರುವ ಸ್ತ್ರೀಯ ಅಂತರಂಗವನ್ನು ನೋಡಬಹುದು. ಸ್ವತಂತ್ರ ಹಾಗೂ ತಾಯ್ತನ ಬಯಸುವ ಹೆಣ್ಣುಗಳಾಗಿ ಎರ್ಮಾ ಮತ್ತು ಗೌಡ್ತಿ ಕಂಡುಬರುತ್ತಾರೆ.ಆದರೆ ಇವರಿಗೆ ಸಮಾಜದ ಕಟ್ಟುಪಾಡುಗಳನ್ನು ಮೀರಲು ಭಯವಿದೆ. ಈ ಭಯದಿಂದ ತಮ್ಮ ಆಸೆ ಆಕಾಂಕ್ಷೆಗಳನ್ನು ಸ್ವಗತ ಹಾಗೂ ಕನಸುಗಳಲ್ಲಿ ಕಂಡುಕೊಳ್ಳುತ್ತಾರೆ.

ಎರ್ಮಾ ನಾಟಕದಲ್ಲಿ ಲೋರ್ಕಾ ಎರ್ಮಾಳ ಕನಸನ್ನು ಹಾಡಿನ ರೂಪದಲ್ಲಿ ವ್ಯಕ್ತಪಡಿಸುತ್ತಾನೆ. ಅದೇ ರೀತಿ ಕಂಬಾರರು ತಮ್ಮ ಜೋಕುಮಾರಸ್ವಾಮಿ ನಾಟಕದಲ್ಲಿ ಗೌಡ್ತಿಯ ಕನಸಿನ ಮೂಲಕ ಹಾಗೂ ಸ್ವಗತದ ಮೂಲಕ ಹೆಣ್ಣಿನ ಭಾವನೆಗಳನ್ನು ವ್ಯಕ್ತಪಡಿಸಿದ್ದಾರೆ.

ಎರ್ಮಾ ನಾಟಕದ ಮೊದಲ ದೃಶ್ಯದಲ್ಲೇ ರಂಗದ ಮೇಲೆ ವಿಚಿತ್ರ ಕನಸಿನಂಥ ಬೆಳಕು ಎಂಬ ವಾಕ್ಯವಿದೆ. ಇಲ್ಲಿ ಯಾರೋ ಕರೆದುಕೊಂಡು ಬರುತ್ತಿರುವ ಮಗು ಮಿಂಚಿ ಆ

ಬೆಳಕಿನಂತೆ ಮಾಯವಾಗುತ್ತದೆ. ಇದು ರಂಗದ ಮೇಲೆ ಆಗುವಂತೆ ಅವಳ ಮನಸ್ಸಿನಲ್ಲೂ ಆಗುತ್ತಿದೆ.

ಎರ್ಮಾ : ನನ ಮಾತು ಸುಳ್ಳಲ್ಲ. ಕೇಳೋ ನನಕಂದ
ನಿನ್ನೊಡನಿರುವೆನೆಂಬ ಕನಸು ಹುಸಿಯಾಯ್ತು
ನನ್ನ ಒಡಲೊಡೆದು ಆಗುವುದು ಎಲ್ಲಾ ಬರಿದು
ನೀ ಬರುವುದೆಂದೋ ನನ್ನೊಡಲ ಒಡೆದು ? [೧೯]

ಒಂದು ಹೆಣ್ಣು ಮನಸ್ಸಿನಲ್ಲಿರುವ ಕೆಲವೊಂದು ಆಲೋಚನೆಗಳನ್ನು ನೇರವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಇದಕ್ಕೆ ಕಾರಣ ಅವಳಲ್ಲಿರುವ ಲಜ್ಜೆ, ಭಯ, ಕೀಳರಿಮೆ, ಮತ್ತು ಒತ್ತಡಗಳೇ ಆಗಿವೆ. ಆದುದರಿಂದ ತನ್ನ ಭಾವನೆಗಳ ಸ್ವಗತದ ಮೂಲಕ ತೋಡಿಕೊಳ್ಳುವುದರಿಂದ ಅವಳ ಮನಸ್ಸು ಹಗುರಾಗುತ್ತದೆ. ಇದೇ ರೀತಿ ತನ್ನ ಅಂತರಂಗದ ಭಾವನೆಗಳನ್ನು ಗೌಡ್ತಿಯು ಗೌಡನಿಗೆ ನೇರವಾಗಿ ಹೇಳಲು ಸಾಧ್ಯವಾಗದೇ ಕನಸು ಎಂದು ಹೇಳುತ್ತಾಳೆ.



ಗೌಡ್ತಿ: ಹುಣ್ಣೀವಿ ಚಂದ್ರ ಮೂಡಿದ್ದಾ, ನಮ್ಮ ಹೊಲದಾಗಿನ
ಗಿಡದಾಗೊಂದ ಪಂಚರಂಗಿ ಗಿಣೀ ಕುಂತಿತ್ತು, ಬೆಳದಿಂಗಳ
ದಾಗ ಸೈತ ಅದರ ಬಣ್ಣ ಥಳಾ ಥಳಾ ಹೊಳೀತಿತ್ತು. ಅಷ್ಟರಾಗ
ಯಾಕೋ ಏನೋ ಎಲ್ಲಾ ಮಂದಿ ನಗಾಕ ಸುರುಮಾಡಿದರು. [೨೦]

''ಬೆಳಕಿರುವ ಹಾದಿಯಲ್ಲಿ ನಡೆಯಬಹುದು ಆದರೆ ಕನಸಿಲ್ಲದ ಹಾದಿಯಲ್ಲಿ ನಡೆಯಬಹುದೇ'' ಎಂಬ ಯಯಾತಿಯ ಮಾತಿನಂತೆ ಕನಸಿಲ್ಲದ ಜೀವನವನ್ನು ಕಲ್ಪಿಸಿಕೊಳ್ಳುವುದು ಕಷ್ಟಸಾಧ್ಯ.

ಇಲ್ಲಿಗೌಡ್ತಿಯ ಕನಸನ್ನು ಗಮನಿಸಿದರೆ ಇದು ಮುಂದೆ ನಡೆಯಬಹುದಾದ ಘಟನೆಗಳನ್ನು ಸೂಚಿಸುವಂತಿದೆ. ತಾನು ಬಸಿರಾಗಿ ಮಗುವನ್ನು ಪಡೆಯುತ್ತೇನೆಂಬ ತವಕ ಇವಳಲ್ಲಿದೆ. ಇಲ್ಲಿ ಬರುವ 'ಎಲ್ಲಾ ಮಂದಿ ನಗಾಕ ಸುರುಮಾಡಿದರು' ಎಂಬ ವಾಕ್ಯದಲ್ಲಿ ಇವಳು ಕಟ್ಟಳೆಯನ್ನು ಮೀರಿ ಬೇರೊಬ್ಬನ ಜೊತೆ ಅನೈತಿಕ ಸಂಬಂಧ ಹೊಂದಿ ಜನರ ಅಪಹಾಸ್ಯಕ್ಕೆ ದಾರಿ ಮಾಡಿಕೊಡುತ್ತಾಳೆಂಬ ಸೂಕ್ಷ್ಮ ವಿಷಯವನ್ನು ಇದು ಹೇಳುತ್ತದೆ.

'ಕನಸು ಮತ್ತು ನಿರಾಶೆ' ಲೋರ್ಕಾ ನಾಟಕದ ವಸ್ತುವಾಗಿದೆ. ಒಂದು ಗಳಿಗೆಯಲ್ಲಿ ಕನಸಿನಲ್ಲಿ ಮಗ್ನ ಆಗಿರುವ ಎರ್ಮಾ ಹಾಗೂ ಆ ಕನಸು ಭಗ್ನವಾಗಿರುವ ಎರ್ಮಾಳನ್ನು ಈ ನಾಟಕದಲ್ಲಿನೋಡಬಹುದು. ಕನಸಿನ ರೂಪವಾಗಿ ಎರ್ಮಾ ಕಂಡು ಬಂದರೆ ವಾಸ್ತವ ರೂಪವಾಗಿ ಯುವಾನ್ ಕಂಡು ಬರುತ್ತಾನೆ. ಕನಸು ಮತ್ತು ಕಟುವಾಸ್ತವಗಳ ಮುಖಾಮುಖಿಯನ್ನು ಇವರಿಬ್ಬರಿಂದಲೂ ನೋಡಬಹುದು.

ಎರ್ಮಾ ಎಲ್ಲಾವಸ್ತುವಿಗೂ ಒಂದು ಅರ್ಥವಿರುವ ಹಾಗೆ ತನ್ನ ಜೀವನಕ್ಕೂ ಒಂದು ಅರ್ಥವಿದೆ ಎಂದು ನಂಬಿದ್ದಾಳೆ. ಅವಳ ಜೀವನದ ಮುಖ್ಯ ಧ್ಯೇಯವೆಂದರೆ ತಾಯ್ತನ ಅದನ್ನು ಇವಳು ವಾಸ್ತವದಲ್ಲಿ ಪಡೆಯಲಾಗುತ್ತಿಲ್ಲ ಆದರೆ ಸುಪ್ತಪ್ರಜ್ಞೆಯಲ್ಲಿ ಪಡೆಯುತ್ತಾಳೆ.

ಎರ್ಮಾ : ಉಪ್ಪು ಕೊಡುವುದು ಕಡಲು ಹಣ್ಣು ಕೊಡುವುದು ಭೂಮಿ
ಮಳೆಯು ಹಿಡಿವಂತೆ ಮುಗಿಲು
ಒಡಲು ಹಿಡಿದಿದೆ ಕೋಮಲ ಕೂಸುಗಳ[೨೦]

ಗೌಡ್ತಿಯು ಗೌಡನನ್ನು ಮಕ್ಕಳಿಗಾಗಿ ಎಷ್ಟೊಂದು ನಿವೇದಿಸಿ ಕೊಂಡರು. ಸಹ ಅವನು ತಾತ್ಸಾರ ಮಾಡುತ್ತಾನೆ. ಈ ತಾತ್ಸಾರದ ಮಾತುಗಳು ಅವಳ ಭಾವನೆಯನ್ನು ಬುಡಮೇಲು ಮಾಡುತ್ತವೆ.

''ನೈಜತೆಯೊಡನೆ ವ್ಯವಹರಿಸಲು ಮತ್ತು ಸಾಮಾಜಿಕ ಪರಿಸರದೊಡನೆ ವ್ಯವಹರಿಸುವುದು ತುಂಬ ಕಷ್ಟವೆನಿಸಿದಾಗ ಹಗಲುಗನಸಿನ ಮೊರೆ ಹೋಗುವುದು ಸಾಮಾನ್ಯ''[೨೨] ಎಂದು ಯಾಂಗ್ ಹೇಳುತ್ತಾನೆ. ಇದೇ ರೀತಿಯ ಹಗಲುಗನಸಿಗೆ ಗೌಡ್ತಿಯು ಮೊರೆ ಹೋಗುತ್ತಾಳೆ.

ಗೌಡ್ತಿ: (ಅಳುತ್ತ ಹಗಲಗನಸು ಕಾಣುತ್ತಾ)

ಗೌಡ ಇನ್ಹ್ಯಾಂಗ ಹೇಳಲೇ ನಾ ಹೆಣ್ಣಂತ ? ದೂರದ ಹಕ್ಕಿ ಹಾರಿ ಬರತ್ತೈತಿ
ಗೂಡಿನಾಗ ಕೂರತ್ತೈತಿ ಆ ನಾಡಿನ ಹಾಡೆಲ್ಲ ಹಾಡತ್ತೈತಿ.[೨೩]

ಈನಾಟಕಗಳಲ್ಲಿ ತಮ್ಮ ಗಂಡಂದಿರಿಂದ ಮಕ್ಕಳಾಗುವುದಿಲ್ಲ ಎಂಬುದನ್ನು ತಿಳಿದು ಎರ್ಮಾ ಮತ್ತು ಗೌಡ್ತಿ ಇಬ್ಬರೂ ದೇವರ ಮೊರೆಗೆ ಹೋಗುತ್ತಾರೆ. ದೇವರ ಕೃಪೆಯಿಂದ ತಮಗೆ ಮಕ್ಕಳಾಗುತ್ತವೆಂದು ಬಲವಾಗಿ ನಂಬಿದ್ದಾರೆ. ಅದು ಸಾಧ್ಯವಾಗದಿದ್ದಾಗ ಸುಪ್ತ ಪ್ರಜ್ಞೆಯಲ್ಲೇ ಮಗುವಿಗಾಗಿ ಹಂಬಲಿಸುತ್ತಾರೆ.

ಎರ್ಮಾ: ಈ ಪವಿತ್ರ ಯಾತ್ರೆಯಲಿ
ಪಾಪಿಯಕರೆ ಪ್ರಭು ಆಲಿಸಲಿ
ಮುಳ್ಳುಗಳಿರಲಿ ಸಾವಿರ ಸಾವಿರ
ನನ್ನೊಳಗರಳಲಿ ಗುಲಾಬಿ ನಿರಂತರ [೨೪]

ಗೌಡ್ತಿಯು ತನ್ನ ಕನಸು ನಿಜವಾಗುತ್ತದೆಂಬ ಭ್ರಮೆಯಲ್ಲಿದ್ದಾಳೆ. ಅದೇ ರೀತಿ ಅವಳ ಈ ಭ್ರಮೆಯು ವಾಸ್ತವವಾಗಿಯೇ ನಡೆಯುತ್ತದೆ. ಇವಳು ತನ್ನ ಕನಸಿನಲ್ಲಿ ಕಂಡದ್ದನ್ನು ಬೇರೆಯವರಿಗೆ ಹೇಳುವ ಮೂಲಕ ತನ್ನ ಮನಸ್ಸನ್ನು ಹಗುರ ಮಾಡಿ ಕೊಳ್ಳಲು ಬಯಸುತ್ತಾಳೆ. ಆದರೆ ಬಸಣ್ಣ ಹಾಗೂ ಗೌಡ ಅವಳ ಕನಸಿಗೂ ನಿಜ ಜೀವನಕ್ಕೂ ಸಂಬಂಧವೇ ಇಲ್ಲ ಎಂಬ ಧೋರಣೆಯಿಂದ ಅವಳ ಮಾತನ್ನು ಲೆಕ್ಕಿಸದೆ ಕೊನೆಗೆ ದುರಂತವನ್ನಪ್ಪುತ್ತಾರೆ.

ಗೌಡ್ತಿ : ಕನಸಿನಾಗೊಂದ ಅಡಿವ್ಯಾಗಿತ್ತು ಅಡಿವ್ಯಾಗೊಂದ ಗವೀ
ಇತ್ತು ಗವ್ಯಾಗಿಂದ ನೀ 'ಏ ಹುಡುಗಿ' ಅಂತ ಕರದಾಂಗಾಯ್ತು.
ಗೌಡ ಸಿಳ್ಳಿ ಹಾಕ್ಕೊಂಡ ಹೊರಗ ಅಡ್ಡಾಡುತ್ತಿದ್ದ
ಬಸಣ್ಣಾ ಇದ ನಮ್ಮ ಕಡೀ ಭೇಟಿ ಆಯ್ತಲ್ಲೊ ॥[೨೫]

ಆದರೆ ಎರ್ಮಾ ನಾಟಕದಲ್ಲಿ ಎರ್ಮಾಳ ಕನಸು ನಿಜವಾಗದ ನಿಜವಾಗಲೂ ಸಾಧ್ಯವೂ ಇಲ್ಲದ ಸ್ಥಿತಿಯಿದೆ. ಇವಳ ಕನಸಿಗೂ ಹಾಗೂ ವಾಸ್ತವಕ್ಕೂ ಸಂಬಂಧವಿಲ್ಲವೆಂದು ತಿಳಿದು ದಿಗ್ಭ್ರಮೆಗೊಳ್ಳುತ್ತಾಳೆ.

ಎರ್ಮಾ : ಬಂಜೆ, ಹೌದು ನಾನು ಬಂಜೆ ಇನ್ನು ಎಂದೆಂದಿಗೂ ನಾನು
ಏಕಾಂಗಿ, ಈಗದು ನಿಜವಾಗಿ ಹೋಯ್ತು, ಏಕಾಂಗಿ
ಏಕಾಂಗಿ ಈ ಬಂಜೆ ಮೈಯೊಂದಿಗೆ ಎಂದೆಂದಿಗೂ ಏಕಾಂಗಿ

ಎರ್ಮಾ ಯುವಾನ್‌ನನ್ನು ಕೊಲ್ಲುವುದರ ಮೂಲಕ ತನ್ನ ಕನಸ್ಸನ್ನು, ಬಯಕೆ ಹಾಗೂ ಆಸೆಯನ್ನು ಕೊಲ್ಲುತ್ತಾಳೆ.

## ೨. ಜೋಕುಮಾರ ಸ್ವಾಮಿ ಹಾಗೂ ಎರ್ಮಾ ನಾಟಕಗಳ ಸಂಕೇತ ಪ್ರಪಂಚ

ಜೋಕುಮಾರ ಸ್ವಾಮಿ ಮತ್ತು ಎರ್ಮಾ ನಾಟಕಗಳಲ್ಲಿ ಲೋರ್ಕಾ ಹಾಗೂ ಕಂಬಾರರು ಸಮೃದ್ಧವಾದ ಸಂಕೇತಗಳನ್ನು ತಮ್ಮ ನಾಟಕದುದ್ದಕ್ಕೂ ಬಳಸಿದ್ದಾರೆ.

ಜೋಕುಮಾರಸ್ವಾಮಿ ಎನ್ನುವುದು ಜಾನಪದ ದೇವರು. ಈ ದೇವರನ್ನು ಉತ್ತರ ಕರ್ನಾಟಕದಲ್ಲಿ ಪೂಜಿಸುತ್ತಾರೆ. ಈ ದೇವರು ಫಲವತ್ತತೆಯ ಸಂಕೇತವಾಗಿದೆ. ಇದನ್ನು ಪೂಜಿಸುವುದರಿಂದ ಮಳೆಯಾಗಿ ಒಳ್ಳೆಯ ಬೆಳೆ ಬರುತ್ತದೆ ಎಂಬ ನಂಬಿಕೆ ಜನರಲ್ಲಿ ಇದೆ. ಇದನ್ನು ಕಂಬಾರರು ಕಾಮದ ಸಂಕೇತವಾಗಿ ತಮ್ಮ ನಾಟಕದಲ್ಲಿ ಬಳಸಿದ್ದಾರೆ.

ಇದೇ ರೀತಿ ಲೋರ್ಕಾ ತನ್ನ ಎರ್ಮಾ ನಾಟಕದಲ್ಲಿ ಜಾತ್ರೆಯ ಸನ್ನಿವೇಶವನ್ನು ಬಳಸಿದ್ದಾನೆ. ಇದೂ ಕೂಡ ಜಾನಪದೀಯ ನೆಲೆಯಲ್ಲಿದೆ. ಯಾರು ಮಕ್ಕಳನ್ನು ಪಡೆದಿರವುದಿಲ್ಲವೋ ಅವರು ಈ ಜಾತ್ರೆಗೆ ಬಂದು ಭಾಗವಹಿಸಿ ಮಕ್ಕಳನ್ನು ಪಡೆಯಬಹುದು. ಇಲ್ಲಿ ವೈವಾಹಿಕ ಚೌಕಟ್ಟನ್ನು ಮೀರಿ ಬೇರೊಬ್ಬರಿಂದ ಮಕ್ಕಳನ್ನು ಪಡೆಯುತ್ತಾರೆ. ಇಲ್ಲಿ ಜಾತ್ರೆ ಎನ್ನುವುದನ್ನು ಲೋರ್ಕಾ ಒಂದು ಲೈಂಗಿಕ ರೂಪಕವಾಗಿ ತನ್ನ ನಾಟಕದಲ್ಲಿ ತಂದಿದ್ದಾನೆ. ಇವನ ನಾಟಕದ ಕೇಂದ್ರ ಬಿಂದು ಕುದುರೆ ಈ ಕುದುರೆ ಪ್ರತಿಮೆಯು ಗಂಡು ಹೆಣ್ಣಿನ ಲೈಂಗಿಕ ದಾಹ ದ್ವಂದ್ವ ಮತ್ತು ದುರಂತ ಸಾವುಗಳಿಗೆ ಸಂಕೇತವಾಗಿದೆ.

ಡಾ. ಬಸವರಾಜ ಮಲಶೆಟ್ಟಿಯವರು ಕಂಬಾರರ ಬದುಕು ಬರಹದ ಬಗ್ಗೆ ಬರೆಯುತ್ತಾ ಅವರು ಜೋಕುಮಾರಸ್ವಾಮಿ ನಾಟಕದಲ್ಲಿ ಬಳಸುವ ಸಂಕೇತಗಳ ಬಗ್ಗೆ ಈ ರೀತಿ ಹೇಳಿದ್ದಾರೆ. ''ಸರಳ ಮತ್ತು ನೇರವಾದ ಸಂಕೇತಗಳು ನಾಟಕದುದ್ದಕ್ಕೂ ಹೂವಿನಂತೆ ಹರಡಿಕೊಂಡಿವೆ. ಧೋರಣೆಯ ನಿರೂಪಣೆಯ ರಭಸದಲ್ಲಿ ವಾಚ್ಯವೆನಿಸಬಹುದಾಗಿದ್ದ ಸಂದರ್ಭಗಳು ಈ ಸಂಕೇತಗಳ ಮೂಲಕ ಕಾವ್ಯಾತ್ಮಕವೆನಿಸುತ್ತವೆ. ಗುಂಗು ಹಿಡಿಸುವ ಹಾಡು ಮತ್ತು ಸಂಕೇತಗಳ ಸಮೃದ್ಧಿಯಿಂದ ಕಾವ್ಯಾತ್ಮಕ ರಸವಿಲಾಸದ ಹಂತಕ್ಕೆ ಏರುತ್ತದೆ.'' [೨]

ಈ ನಾಟಕದಲ್ಲಿ ಒಬ್ಬೊಬ್ಬರ ವ್ಯಕ್ತಿತ್ವಕ್ಕೆ ಸಂಬಂಧಿಸಿದಂತೆ ಕಂಬಾರರು ಸಂಕೇತಗಳನ್ನು ಬಳಸಿದ್ದಾರೆ. ಈ ಊರಿನ ಗೌಡನು ದುಷ್ಟನಾಗಿದ್ದಾನೆ ಮತ್ತು ಕ್ರೂರಿಯಾಗಿದ್ದಾನೆ. ಇವನ ಕೆಟ್ಟ ವ್ಯಕ್ತಿತ್ವವನ್ನು ಎತ್ತಿ ಹಿಡಿಯಲು ಮೇಳ ಈ ರೀತಿ ಹೇಳುತ್ತದೆ.

ಮೇಳ: ಒಂದು ಊರಾಗಿದ್ದಾನಿ ಒಬ್ಬ ಗೌಡ
ಊರಾಗ ದೊಡ್ಡ ಪುಂಡಾ
ಅವನ ಹೊಟ್ಟಿಗುಂಡಾ
ತಿರುಗತಾನ ಯಾವತ್ತು ಬಂದೂಕ ಹಿಡಕೊಂಡಾ[೨೮]

ಗೌಡನ ಹೊಟ್ಟೆ ಹಾಗೂ ಬಂದೂಕಿನಿಂದಲೇ ಇವನೊಬ್ಬ ಖಳನಾಯಕ ಎಂದು ತಿಳಿಯುತ್ತದೆ. ಹೊಟ್ಟೆ ಎನ್ನುವುದು ಕೂತು ತಿನ್ನುವುದರ ಭಾವವಾಗಿದೆ. ಇವನು ಊರಿನ ಎಲ್ಲಾ ಜನರನ್ನು ಹೆದರಿಸಿ ತನ್ನ ಮೈಯನ್ನು ದಷ್ಟ-ಪುಷ್ಟವನ್ನಾಗಿ ಮಾಡಿಕೊಂಡಿದ್ದಾನೆ. ಇಲ್ಲಿ ಗೌಡನಿಗೆ ತೋಳಿನಲ್ಲಿಲ್ಲದ ಶಕ್ತಿಯನ್ನು ಬಂದೂಕಿನ ಬಲದಿಂದ ಹಣದಿಂದ ಗಳಿಸುವ ಈತ ದುಷ್ಟಶಕ್ತಿಯ ಸಂಕೇತದಂತಿದ್ದಾನೆ. ಬಂದೂಕು ಇಲ್ಲದಿದ್ದರೆ ಗೌಡನೂ ಇಲ್ಲವಾಗುತ್ತಾನೆ. ಇಲ್ಲಿ ಬಂದೂಕಿನಿಂದ ಜನರನ್ನು ಹೆದರಿಸಿ ಅವರನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ ಒಂದು ಮಾರ್ಗವಾಗಿ ಗೌಡನಿಗೆ ಇದು ಕಂಡು ಬಂದಿವೆ.

'ಎರ್ಮಾ' ನಾಟಕದಲ್ಲಿ ಎರ್ಮಾ ಯುವಾನ್‌ಗೆ 'ನಿನ್ನ ಮುಖ ನೋಡಿಕೋ! ಸೂರ್ಯನ ಮುಖಾನೇ ನೋಡ್ದಂಗಿಲ್ಲ' ಎನ್ನುತ್ತಾಳೆ. ಅಂದರೆ ಇವನು ಯಾವಾಗಲೂ ನಿರಂತರ ದುಡಿಯುವ ವ್ಯಕ್ತಿಯಾಗಿ ಕಂಡು ಬರುತ್ತಾನೆ. ಇವನ ಧ್ಯೇಯ ಹಣ ಸಂಪಾದಿಸುವುದೇ ಆಗಿದೆ. ತನ್ನ ಹೆಂಡತಿಯ ಆಸೆ ಆಕಾಂಕ್ಷೆಗಳಿಗೆ ಬೆಲೆ ಕೊಡದ ವ್ಯಕ್ತಿಯಾಗಿ ಕಂಡು ಬರುತ್ತಾನೆ. ಇಲ್ಲಿ ನಾವು ಪ್ರಕೃತಿ ಮತ್ತು ಮನುಷ್ಯನ ಮುಖಾಮುಖಿಯನ್ನು ನೋಡಬಹುದು. ಪ್ರಕೃತಿಯನ್ನು ಪ್ರತಿನಿಧಿಸುವ ಸ್ತ್ರೀಯ ಜೊತೆಗೆ ಇವನ ಯಾವ ಸಂಪಕವೂ ಇಲ್ಲದಂತೆ ಕಂಡು ಬರುತ್ತಾನೆ. ಸೂರ್ಯ ಎನ್ನುವುದು 'ಬೆಳಕಿನ' ಸಂಕೇತವಾಗಿದೆ. ಅದರೆ ಕತ್ತಲಿನತ್ತ ಮುಖ ಮಾಡಿದ್ದ ಯುವಾನ್‌ನ್ನು 'ಬೆಳಕಿನ ಕಡೆಗೆ' ತಿರುಗು ಎಂದು ಹೇಳುತ್ತಾಳೆ. ಇದೇ ರೀತಿ ಆದಿವಾಸಿ ಹೆಂಗಸು ಎರ್ಮಾಳಿಗೆ ಬೆಳಕಿನ ಕಡೆ ನೋಡು ಎಂಬ ಮಾತನ್ನು ಹೇಳುತ್ತಾಳೆ. ಹೆಣ್ಣಿನ ಮೇಲೆ ಹೇರಿರುವ ಕಟ್ಟಳೆಯನ್ನು ಮನೆಯ ನಾಲ್ಕು ಗೋಡೆಗಳ ಮಧ್ಯೆ ಹೆಂಗಸರು ಜೀವಿಸಬೇಕೆಂಬ 'ಸಮಾಜ ಹೇರಿರುವ ಕಟ್ಟಳೆಯನ್ನು ಮೀರು' ಎಂಬುದಕ್ಕೆ ಸಂವಾದಿಯಾಗಿ ಲೋರ್ಕಾ ಈ ಪದವನ್ನು ಬಳಸಿದ್ದಾನೆ.

ಕಂಬಾರರು 'ಹೊಲ' ಎಂಬ ಸಂಕೇತವನ್ನು ತಮ್ಮ ನಾಟಕದಲ್ಲಿ ತಂದಿದ್ದಾರೆ. ಇಲ್ಲಿ ಹೊಲ ಎಂದರೆ 'ಸಮೃದ್ಧವಾಗಿ ಬೆಳೆಯನ್ನು ಬೆಳೆಯುವುದು' ಎಂಬ ಅರ್ಥದಿಂದ ಕೂಡಿದೆ. ಆದರೆ ಇಲ್ಲಿ ಕಂಬಾರರು ಗೌಡ್ತಿಯನ್ನು ಒಂದು ಹೊಲಕ್ಕೆ ಹೋಲಿಸಿದ್ದಾರೆ. ಅಂದರೆ ಅವಳು ಬಂಜೆಯಲ್ಲ ಎಂಬುದನ್ನು ಪರೋಕ್ಷವಾಗಿ ಹೇಳಿದ್ದಾರೆ.

ಮಗದೊಬ್ಬ : (ಗೌಡ್ತಿಯನ್ನು ತೋರಿಸುತ್ತಾ) ಅದು ನಮ್ಮ ಢಂ ಢಂ
ದೇವರ ಹೊಲಾ ।[೨೯]

ಈ ಹೊಲ ಎನ್ನುವುದು ನಾಟಕದ ಮೊದಲ ದೃಶ್ಯದಲ್ಲಿ ಬಂಜರು ಭೂಮಿಯಿಂದ ಕೂಡಿದೆ. ಇದನ್ನು ಉಳಲು ಗೌಡನಿಗೆ ತಾಕತ್ತಿಲ್ಲ ಎಂಬುದನ್ನು ತಿಳಿಸುತ್ತದೆ. ಅವಳ ತಾಯ್ತನದ ಬಯಕೆಯನ್ನು ಈಡೇರಿಸಲು ಗೌಡನಿಂದ ಸಾಧ್ಯವಿಲ್ಲ ಎಂಬುದನ್ನು ಕಂಬಾರರು ಹೇಳಲು ಈ ಸಂಕೇತವನ್ನು ಬಳಸಿದ್ದಾರೆ.

ಎರ್ಮಾ ನಾಟಕದಲ್ಲಿ ಯುವಾನ್ ತನ್ನ ಹೆಂಡತಿಯನ್ನು ಒಂದು ಕುರಿಗೆ ಹೋಲಿಸಿದ್ದಾನೆ. ಇವನ ಪ್ರಕಾರ ಹೆಣ್ಣುಗಳೆಂದರೆ ಮಾರಾಟದ ವಸ್ತು ಎಂದು ತಿಳಿದಿದ್ದಾನೆ. ಇವನು ದುಡ್ಡಿನಿಂದ ಕುರಿಗಳನ್ನು ಕೊಂಡುಕೊಂಡ ಹಾಗೆ ಎರ್ಮಾಳನ್ನು ವಿಕ್ಟರ್‌ನಿಂದ ಕೊಂಡು ಕೊಳ್ಳುತ್ತಾನೆ. ಇಲ್ಲಿ ಲೋರ್ಕಾ ಹೆಂಗಸರನ್ನು ಕುರಿಗೆ ಸಂಕೇತಿಸಿದರೆ ಗಂಡಸರನ್ನು ಟಗರುಗಳಿಗೆ ಸಂಕೇತಿಸಿದ್ದಾನೆ.

ಗಂಡು ಮು : ಗಂಡಸಿಗುಂಟು ಬಲು ಬೆಲೆ ಇಲ್ಲಿ
ಟಗರುಗಳಂತೆ ಅವರುಗಳು[೩೦]

ಈ ನಾಟಕದಲ್ಲಿ ಯುವಾನ್ ಹೆಣ್ಣನ್ನು 'ಕುರಿ' ಎಂದು ಭಾವಿಸಿದರೆ ಜೋಕುಮಾರಸ್ವಾಮಿ ನಾಟಕದಲ್ಲಿ ಗೌಡನು ಒಂದು 'ಕೋಳಿ' ಎಂದು ಭಾವಿಸಿದ್ದಾನೆ. ಇಲ್ಲಿ ಇವರಿಗೆ ಹೆಣ್ಣುಗಳೆಂದರೆ ಒಂದು ಮೂಕಪ್ರಾಣಿಗಳಿದ್ದ ಹಾಗೆ. ನಾವು ಹೇಗೆ ಬೇಕಾದರೂ ಬಳಸಬಹುದು ಎಂಬ ಧೋರಣೆಯಿಂದ ಕೂಡಿದ್ದಾರೆ. ಅದೇ ರೀತಿ ತಮ್ಮ ಹೆಂಡತಿಯರನ್ನು ಗುಲಾಮರಾಗಿ ಮಾಡಿಕೊಂಡಿದ್ದಾರೆ.

ಗೌಡ : ಗುರ್‍ರ್ಯಾ ಈ ಕಾಡಕೋಳಿ ಹಿಡೀಬೇಕಲ್ಲೋ [೩೧]

ಇಲ್ಲಿ ಗೌಡ ನಿಂಗಿಗೆ 'ಕಾಡುಕೋಳಿ' ಎಂದು ಸಂಬೋಧಿಸುತ್ತಾನೆ. ಅಂದರೆ ಇವನ ಪ್ರಕಾರ ನಾಡಕೋಳಿಗಳನ್ನು ಸುಲಭವಾಗಿ ಪಳಗಿಸಬಹುದು. ಆದರೆ ಕಾಡಕೋಳಿಯನ್ನು ಹಿಡಿಯುವುದು ಕಷ್ಟ ಎಂಬ ಧೋರಣೆಯಿಂದ ಕೂಡಿದೆ. ನಿಂಗಿಯು ಗೌಡನ ಅಧಿಕಾರ, ಶ್ರೀಮಂತಿಗೆ ಹೆದರದೆ ಅವನ ವಿರುದ್ಧವೇ ಮಾತನಾಡುತ್ತಾಳೆ. ಇದರಿಂದ ಇವಳನ್ನು ಸುಲಭದಲ್ಲಿ ತನ್ನ ಬಲೆಗೆ ಬೀಳಿಸಿಕೊಳ್ಳಲು ಆಗುವುದಿಲ್ಲ ಎಂದು ತಿಳಿದು ಒಂದು ಕಾಡುಕೋಳಿಗೆ ಹೋಲಿಸಿದ್ದಾನೆ. ಇಲ್ಲಿ ಗಂಡಸಿಗೆ 'ಹುಂಜ' ಎಂದೂ ಕಂಬಾರರು ಸಂಕೇತಿಸಿದ್ದಾರೆ.

ಇಲ್ಲಿ ಹೆಣ್ಣಿಗೆ ಸ್ವತಂತ್ರ ಕೊಡದ ಪುರುಷ ಪ್ರಧಾನ ವ್ಯವಸ್ಥೆಯ ದಬ್ಬಾಳಿಕೆಯನ್ನು ಲೋರ್ಕಾ ಮತ್ತು ಕಂಬಾರರು ಸಂಕೇತಗಳ ಮೂಲಕ ವ್ಯಂಗ್ಯವಾಗಿ ಹೇಳಿದ್ದಾರೆ.

ಯುವಾನ್‌ಗೆ ತನ್ನ ಹೆಂಡತಿಯ ಮೇಲೆ ತೀವ್ರವಾದ ಅನುಮಾನವಿದೆ. ಇದರಿಂದಾಗಿ ಅವಳನ್ನು ನೋಡಿಕೊಳ್ಳಲು ತಮ್ಮ ತಂಗಿಯರನ್ನು ನೇಮಿಸುತ್ತಾನೆ. ಇದು ಎರ್ಮಾಳ ವ್ಯಕ್ತಿತ್ವಕ್ಕೆ ಹಾನಿಯಾಗುತ್ತದೆ. ಇವಳು ಸ್ವಚ್ಛಂದವಾಗಿ ಬದುಕಬೇಕೆಂಬ ಆಸೆವುಳ್ಳವಳಾಗಿದ್ದಾಳೆ. ಆದರೆ ಯುವಾನ್ ಇವಳನ್ನು ಬಂದಿಯಾಗಿಡುತ್ತಾನೆ. ಎರ್ಮಾ ಇವನ ತಂಗಿಯರನ್ನು ನಾಯಿಗಳಿಗೆ ಹೋಲಿಸುತ್ತಾಳೆ. ನಾಯಿ ಹೇಗೆ ನಿಯತ್ತಿನಿಂದ ತನ್ನ ಮಾಲೀಕನ ಮನೆಯನ್ನು ಕಾಯುತ್ತದೋ ಅದೇ ರೀತಿ ಇವರುಗಳು ತನ್ನ ಅಣ್ಣನಿಗೆ ನಿಷ್ಠವಾಗಿ ಎರ್ಮಾಳನ್ನು ಕಾಯುತ್ತಾರೆ. ಎರ್ಮಾ ತನ್ನ ಗಂಡನಿಗೆ ಎಷ್ಟೇ ನಿಷ್ಠೆಯಿಂದ ಕೂಡಿದ್ದರೂ ಸಹ ಯುವಾನ್ ಇವಳನ್ನು ಅನುಮಾನಿಸುತ್ತಾನೆ.

ಎರ್ಮಾ: ಅದು ನನ್ನ ಶಿಲುಬೆ, ಅದನ್ನು ನಾನು ಹೊರಲೇ ಬೇಕು [೩೨]

ಏಸುಕ್ರಿಸ್ತ ಜೀವಂತವಿರುವಾಗಲೇ ಹೇಗೆ ದುಷ್ಟ ಜನರು ಅವನನ್ನು ಶಿಲುಬೆಗೇರಿಸಿದ್ದರೋ ಅದೇ ರೀತಿ ಇವಳು ಜೀವಂತ ಶಿಲುಬೆಯನ್ನು ಹೊತ್ತಿದ್ದಾಳೆ. ಈ ಸಮಾಜದ ನೀತಿ ನಿಯಮಗಳನ್ನು ಹೇಗೆ ತಕ್ಷಣವೇ ಬದಲಾಯಿಸಲು ಸಾಧ್ಯವಿಲ್ಲವೋ ಅದೇ ರೀತಿ ತನ್ನ ಬದುಕನ್ನು ಯಾರೂ ಬದಲಾಯಿಸಲು ಸಾಧ್ಯವಿಲ್ಲ ಎಂಬ ನಿಲುವು

ಹೊಂದಿದ್ದಾಳೆ. ಇಲ್ಲಿ 'ಶಿಲುಬೆ' ಎಂದರೆ ಕಟ್ಟಿಹಾಕಿದ ಸ್ಥಿತಿ ಎಂಬ ಅರ್ಥ ದಿಂದ ಕೂಡಿದೆ. ಈ ಸಂಕೇತದಿಂದ ಎರ್ಮಾಳಂತೆ ಈ ಸಮಾಜದಲ್ಲಿ ಅನುಭವಿಸುತ್ತಿರುವ ಎಷ್ಟೋ ಹೆಣ್ಣುಗಳ ಯಾತನೆಗಳನ್ನು ಲೋರ್ಕಾ ಪರೋಕ್ಷವಾಗಿ ಹೇಳುತ್ತಿದ್ದಾನೆ.

ಎರ್ಮಾಳ ದುಃಖ ಹೇಗಿದೆಯೆಂದರೆ ತನ್ನ ಜೀವನವನ್ನು 'ಬಯಲಿ'ಗೆ ಹೋಲಿಸಿಕೊಳ್ಳುತ್ತಿದ್ದಾಳೆ. ಬಯಲಿನಲ್ಲಿ ಹೇಗೆ ನೀರು ಗಾಳಿ ಇರುವುದಿಲ್ಲವೋ ಅದೇ ರೀತಿ ತನ್ನ ಜೀವನದಲ್ಲಿ ತಾಯ್ತನ ಎನ್ನುವುದು ಬರುವುದೇ ಇಲ್ಲ ಎಂಬ ಸತ್ಯ ತಿಳಿದು ನೋವನ್ನು ಅನುಭವಿಸುತ್ತಾಳೆ.

ಎರ್ಮಾ : ಓ, ದುಃಖದ ಬಯಲೇ !

ಓ ಚೆಲುವಿಗೆ ಮುಚ್ಚಿದ ಬಾಗಿಲೇ ! [೩೩]

ಅವಳ ಎದುರಿಗಿರುವುದು 'ಮುಚ್ಚಿದ ಬಾಗಿಲು' .ವಾಸ್ತವವಾಗಿ ಹಾಗೂ ಸಾಂಕೇತಿಕವಾಗಿ ಮುಚ್ಚಿದ ಸ್ಥಿತಿ. ಎರ್ಮಾಳ ಸ್ಥಿತಿ ತುಂಬಾ ಕರುಣಾಜನಕವಾದುದು. ಆದರೆ ಇದನ್ನು ಅರ್ಥಮಾಡಿಕೊಳ್ಳದ ಈ ಸಮಾಜ ಅವಳನ್ನು ಬಂಜೆ ಎಂದು ನಿಂದಿಸುತ್ತದೆ. ಬಂಜೆ ಹೆಣ್ಣನ್ನು 'ದತ್ತೂರಿ ಹೂಗೊಂಚಲಿಗೆ' ಹೋಲಿಸುತ್ತದೆ. ಈ ದತ್ತೂರಿ ಗೊಂಚಲು ವಿಷದ ಗಿಡವಾಗಿದೆ. ಒಂದುಬಂಜೆ ಹೆಣ್ಣಿನ ಬದುಕು ಎನ್ನುವುದು ಯಾರಿಗೂ ಬೇಡವಾದ ವಿಷದ ಗಿಡವೇ ? ಎಂಬ ವ್ಯಂಗ್ಯಾರ್ಥವನ್ನು ಲೋರ್ಕಾ ಬಳಸಿದ್ದಾನೆ.

ಕಂಬಾರರು ತಮ್ಮ ನಾಟಕದಲ್ಲಿ 'ಹುಣ್ಣಿಮೆ ಚಂದ್ರನ ಸಂಕೇತ'ವನ್ನು ತಂದಿದ್ದಾರೆ. ಹುಣ್ಣಿಮೆ ದಿನ ಹೇಗೆ ಚಂದ್ರನ ಬೆಳಕು ಪ್ರಕಾಶಿಸಿ ಭೂಮಿಗೆ ಬೆಳಕು ಕೊಡುತ್ತದೋ ಅದೇ ರೀತಿ ಗೌಡ್ತಿ ತನಗೆ ಮಗುವಾಗಿ ತನ್ನ ಜೀವನವನ್ನು ಅದು ಬೆಳಗುತ್ತದೆಯೆಂಬ ಆಶಾಭಾವನೆ ಇಟ್ಟುಕೊಂಡಿದ್ದಾಳೆ. ಚಂದ್ರ ಎನ್ನುವುದು 'ಶಾಂತಿ' ಯ ಪರಿಕಲ್ಪನೆ. ಆದರೆ ಈ ನಾಟಕದಲ್ಲಿ ಶಾಂತಿಗೂ ಗೌಡನಿಗೂ ಒಂದಕ್ಕೊಂದು ಸಂಬಂಧವೇ ಇಲ್ಲವಾಗಿದೆ.

ಗೌಡ್ತಿ : ಹುಣ್ಣವಿ ಚಂದ್ರ ಮೂಡಿದ್ದಾ. ನಮ್ಮ ಹೊಲದಾಗಿನ

ಗಿಡದಾಗೊಂದು ಪಂಚರಂಗಿ ಗಿಣೀ ಕುಂತಿತ್ತು. [೩೪]

ಇಲ್ಲಿ 'ಪಂಚರಂಗಿ ಗಿಣಿ' ಎಂಬುದು ಫಲವತ್ತತೆಯ ಸಂಕೇತವೂ ಹಾಗೂ ಕಾಮದ ಪ್ರತೀಕವಾಗಿ ಕಂಬಾರರು ಬಳಸಿದ್ದಾರೆ. ಗೌಡ್ತಿಯ ಜೀವನದಲ್ಲಿ ಹುಣ್ಣಿಮೆ ಚಂದ್ರನಾಗಿ ಗೌಡನ ಬದಲು ಬಸಣ್ಣ ಬಂದು ಅವಳ ಬಾಳನ್ನು ಬೆಳಗುತ್ತಾನೆ. ಇಲ್ಲಿ 'ಗಿಣಿ' ಯೆನ್ನುವುದು 'ಸ್ವಚ್ಛಂದತೆಯ ಸಂಕೇತ' . ಗೌಡ್ತಿಯು ಈ ಸ್ವಚ್ಛಂದಬದುಕಿಗೆ ಹಾತೊರೆಯುತ್ತಾಳೆ. ಆದರೆ ಈ ರೀತಿ ಹಾತೊರೆಯುವಾಗ ಸಮಾಜಕ್ಕೂ ಹಾಗೂ ತನ್ನ ಗಂಡನಿಗೂ ಹೆದರುತ್ತಾಳೆ.

ಗೌಡ್ತಿ : ಏನ ಮಾಡ್ಲಿ ? ಒಂದು ಕಡೆ ಹಾಡೋ ಹಕ್ಕಿ, ಇನ್ನೊಂದ ಕಡೆ ಕಣ್ಣಾಗ ಚೂರಿ ಇಟ್ಟುಕೊಂಡ ಗಂಡ ! [೩೫]

ಕಾಮ ಎಂಬುವುದು ಗಂಡು ಮತ್ತು ಹೆಣ್ಣಿನ ಸಹಜವಾದ ಕ್ರಿಯೆಯಾಗಿದೆ. ಗಂಡು ಮಾತ್ರ ಇದನ್ನು ಮುಕ್ತವಾಗಿ ಪಡೆಯಲು ಸಮರ್ಥನಾಗಿದ್ದಾನೆ. ಆದರೆ ಹೆಣ್ಣು ಇದನ್ನು ಮುಕ್ತವಾಗಿ ಪಡೆಯಲಾಗದೆ ಸಮಾಜದ ನಿರ್ಬಂಧದಲ್ಲಿರಬೇಕಾಗುತ್ತದೆ. ಇಲ್ಲಿ ಕಂಬಾರರು 'ಚೂರಿ' ಎಂಬ ಸಂಕೇತವನ್ನು ತಂದಿದ್ದಾರೆ. 'ಚೂರಿ'ಎಂಬುವುದು ಇರಿದುಕೊಲ್ಲುವ ವಸ್ತುವಾಗಿದೆ. ಅಂದರೆ ಗೌಡನು ಇಲ್ಲಿ ಚೂರಿಯ ರೀತಿ ಎಲ್ಲರನ್ನು ಕೊಲ್ಲುವ ಸ್ವಭಾವವನ್ನು ಹೊಂದಿದ್ದಾನೆ. ಹೆಣ್ಣು ಸ್ವೇಚ್ಛಾಚಾರ ಬಯಸಿದರೆ ಹೇಗೆ ಈ ಸಮಾಜವು ಇರಿದುಕೊಲ್ಲುತ್ತದೆ ಎಂಬುದಕ್ಕೆ ಈ ಸಂಕೇತ ಸಾಕ್ಷಿಯಾಗಿದೆ.

''ಎರ್ಮಾ'' ನಾಟಕದಲ್ಲಿ ಒಂದು ಜಾತ್ರೆ ಜರಗುತ್ತದೆ, ಜಾತ್ರೆಯೆನ್ನುವುದು ಒಂದು ಸಂಭ್ರಮದ ಸ್ಥಿತಿ. ಇದು ಹೊಸ ಆಸೆ ಭರವಸೆಗಳನ್ನು ಮೂಡಿಸುತ್ತದೆ. ಇದನ್ನು ಲೋರ್ಕಾ ಒಂದು ರೂಪಕದಂತೆ ಬಳಸಿದ್ದಾನೆ. ಈ ನಾಟಕದಲ್ಲಿ ಜಾತ್ರೆಯು ಸ್ಮಶಾನದಲ್ಲಿ ನಡೆಯುತ್ತದೆ. ಅಷ್ಟೊಂದು ಕತ್ತಲಲ್ಲೂ ಎರ್ಮಾ ಅಲ್ಲಿ ಧೈರ್ಯವಾಗಿ ಪ್ರಾರ್ಥನೆ ಮಾಡುತ್ತಾಳೆ. ಇಲ್ಲಿ ಇವಳ ನಿರಂತರ ಪ್ರಯತ್ನಕಾಣಿಸುತ್ತದೆ. ಜೀವನದ ನಿಲುಕೊನೆಯಲ್ಲಿ ನಿಂತು ಇನ್ನೇನು ಹುಟ್ಟಲಾಗದು ಎಂಬಲ್ಲಿ ನಿಂತು ಪ್ರಾರ್ಥನೆ ಮಾಡುತ್ತಾಳೆ. ಇಲ್ಲಿ 'ಸ್ಮಶಾನ' ಎನ್ನುವುದು ಒಂದು ಸಂಕೇತದಂತಿದೆ. ಏನೂ ಹುಟ್ಟದ, ಜೀವಂತಿಕೆ ಇರದಿರುವುದರ ಪ್ರತೀಕವಾಗಿದೆ. ಇಲ್ಲಿ ಎರ್ಮಾ ಆಸೆ ಮತ್ತು ನಿರಾಸೆಗಳ ನಡುವೆ ಹೊಯ್ದಾಡುತ್ತಾಳೆ. ಕೊನೆಗೆ ವಾಸ್ತವ ಅರಿವಾಗಿ ನಿರಾಶೆಯ ಅಂತಿಮ ಸ್ಥಿತಿಗೆ ತಲುಪುತ್ತಾಳೆ.

ಜೋಕುಮಾರ ಸ್ವಾಮಿ ನಾಟಕದಲ್ಲಿ ಗೌಡ್ತಿಯ ಅನೈತಿಕ ಸಂಬಂದಧ ವಿಷಯ ಗುರ್ಯಾನ ಮೂಲಕ ಗೌಡನಿಗೆ ತಿಳಿಯುತ್ತದೆ.

ಗುರ್ಯಾ: ಹೌಂದರಿ ? ಬಸಣ್ಣ ಈಗ ಆರು ತಿಂಗಳಿಂದ
ನಿಮ್ಮ ಹೊಲದಾಗ ಮಲಗತಾನ ಗೊತ್ತೈತ್ರಿ ? [೩೬]

ಇಲ್ಲಿ 'ಹೊಲ' ಎಂದರೆ ಮೊದಲೇ ಹೇಳಿದಂತೆ ಗೌಡ್ತಿ ಎಂಬ ಅರ್ಥದಿಂದ ಕೂಡಿದೆ. ಬಸಣ್ಣನು ಆ ಹೊಲದಲ್ಲಿ ಬೆಳೆ ತೆಗೆಯುತ್ತಾನೆ. ಅಂದರೆ ಗೌಡ್ತಿಯು ಇವನಿಂದ ಬಸಿರಾಗಿದ್ದಾಳೆ ಎಂಬ ಬಚ್ಚಿಟ್ಟಿದ್ದ ಸತ್ಯವನ್ನು ಗುರ್ಯಾ ಗೌಡನಿಗೆ ವ್ಯಂಗ್ಯವಾಗಿ ಹೇಳುತ್ತಾನೆ. ಇದರಿಂದ ಗೌಡ ಕುಪಿತಗೊಂಡು ಬಸಣ್ಣನನ್ನು ಕೊಲಲ್ಲು ಮುಂದಾಗುತ್ತಾನೆ. ಬಸಣ್ಣನಿಗೆ ಇದು ಗೊತ್ತಾಗಿ ಗೌಡ್ತಿಗೆ ಈ ರೀತಿ ಹೇಳುತ್ತಾನೆ.

ಬಸಣ್ಣ: ನಮ್ಮಿಬ್ಬರ ಜೀವಕ್ಕಿಂತ 'ಗಿಣಿ' ಜೀವ ದೊಡ್ಡದಲ್ಲೇನ ? [೩೭]

ಇಲ್ಲಿ 'ಗಿಣಿ' ಎಂಬುದನ್ನು ಕಂಬಾರರು ಮೊದಲು ಕಾಮದ ಸಂಕೇತವಾಗಿ ಬಳಸಿದರೆ ನಂತರ 'ಮಗು' ಎಂಬುದರ ಸಂಕೇತವಾಗಿ ಬಳಸಿದ್ದಾರೆ. ಬಸಣ್ಣ ತನ್ನ ಸ್ವಚ್ಛಂದ ಪ್ರಣಯದ ಮೂಲಕ ಗೌಡನಿಂದ ದುರಂತ ಸಾವನ್ನಪ್ಪುತ್ತಾನೆ. ಈ ಪ್ರಣಯ ಗಂಡುಹೆಣ್ಣಿನ ಸಹಜ ಸಂಬಂಧವನ್ನು ಸಮರ್ಥಿಸುತ್ತಿದ್ದರೂ ಸಮಾಜ ಬೆಳೆಸಿಕೊಂಡು ಬಂದಿರುವ ನೈತಿಕತೆಯನ್ನು ವಿರೋಧಿಸುವುದರಿಂದ ಇದು ಹಾದರ ಎಂದು ತೀರ್ಮಾನಿಸಿ ಬಸಣ್ಣನನ್ನು ಕೊಲ್ಲುತ್ತದೆ. ಇದನ್ನು ಸಮಾಜ ಕೊಲೆಯೆಂದು ತಿಳಿಯದೆ ಕರ್ತವ್ಯವೆಂದು ನಂಬಿದೆ.

## ಅಡಿಟಿಪ್ಪಣಿಗಳು

೧. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ : ಡಾ. ಎಚ್.ಎಸ್. ಶ್ರೀಮತಿ, ಪುಟ-೩೦

೨. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು : ಡಾ.ಪ್ರೀತಿ ಶುಭಚಂದ್ರ, ಪುಟ-೩೯

೩. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೪೦

೪. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೮

೫. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬೬

೬. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೪

೭. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೩೭

೮. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೩೭

೯. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬

೧೦. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೯

೧೧. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೯

೧೨ ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೯

೧೩ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬೭

೧೪. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೭

೧೫. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೪೮

೧೬ ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೫೮

೧೭. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬೯

೧೮. ಕಾರ್ಲ್ ಗೆಸ್ಟೋವ್ ಯೂಂಗ್ : ಪ್ರೊ॥ಪಿ. ನಟರಾಜ್, ಪುಟ-೮೯

೧೯. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೫

೨೦. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೩

೨೧ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೪೦

೨೨ ಕಾರ್ಲ್ ಗೆಸ್ಟೋವ್ ಯೂಂಗ್: ಪ್ರೊ||ಪಿ. ನಟರಾಜ್, ಪುಟ-೮೩

೨೩ ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೪೯

೨೪ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬೦

೨೫. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೬೬

೨೬. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬೯

೨೭. ಚಂದ್ರಶೇಖರ ಕಂಬಾರ : ಡಾ. ಬಸವರಾಜ ಮಲಶೆಟ್ಟಿ, ಪುಟ-೬೧

೨೮. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೧

೨೯. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೪

೩೦ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬೩

೩೨. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೧

೩೩. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೩೬

೩೪. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೩೯

೨೪. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೩

೨೫. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೫೮

೨೬. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೬೫

# ಅಧ್ಯಾಯ -೫

## ಎರ್ಮಾ ಹಾಗೂ ಜೋಕುಮಾರಸ್ವಾಮಿ ನಾಟಕಗಳಲ್ಲಿನ ಜನಾಂಗೀಯ ಭಿನ್ನತೆ

ನಮ್ಮ ಭಾರತವು ವಿವಿಧತೆಯಲ್ಲಿ ಏಕತೆಯ ರಾಷ್ಟ್ರ ಎಂದು ಹೆಸರಾಗಿದೆ. ಅಂದರೆ ನಮ್ಮ ದೇಶದಲ್ಲಿ ವಿವಿಧ ಜಾತಿ ಮತ, ಧರ್ಮದ ಜನಗಳಿರುವುದನ್ನು ಕಾಣಬಹುದು. ಸಮಾಜವನ್ನು ಪ್ರತಿನಿಧಿಸುತ್ತಿರುವ ಮನುಷ್ಯರು ಹಲವು ದೇಶ-ಕಾಲ ಘಟ್ಟಗಳಲ್ಲಿ ಧರ್ಮ, ವರ್ಗ ಮತ್ತು ಲಿಂಗಗಳ ನಡುವೆ ಅನೇಕ ತಾರತಮ್ಯಗಳನ್ನು ಮಾಡಿಕೊಂಡು ತಮ್ಮದೇ ಆದ ರೀತಿಯಲ್ಲಿ ಅವರ ಅನಿಸಿಕೆ ಸಿದ್ಧಾಂತಗಳನ್ನು ವಿವಿಧ ಸ್ತರದಲ್ಲಿ ಮಂಡಿಸುತ್ತಾ, ವ್ಯಾಖ್ಯಾನಿಸುತ್ತಾ ಬಂದಿದ್ದಾರೆ.

ಒಂದೇ ಪ್ರದೇಶದಲ್ಲಿ ವಾಸವಿದ್ದರೂ ಕೂಡ ಮನುಷ್ಯ ವ್ಯಕ್ತಿತ್ವದಲ್ಲಿನ ಹಲವು ಭಿನ್ನತೆಗಳನ್ನು ಈ ಸಮಾಜದಲ್ಲಿ ನಾವು ಗುರುತಿಸಬಹುದು. ಇದು ವ್ಯಕ್ತಿ ಹುಟ್ಟಿದ ಪರಿಸರದ ಮೇಲೆ ಅವಲಂಬಿತವಾಗಿರುತ್ತದೆ. ಧರ್ಮಗಳಲ್ಲಿ ಶ್ರೇಷ್ಠ ಕನಿಷ್ಠವೆಂದು ಜಾತಿಯಲ್ಲಿ ಮೇಲು-ಕೀಳು ಎಂದು, ವರ್ಗದಲ್ಲಿ ಶ್ರೀಮಂತ ಬಡವ ಎನ್ನುವಂತೆ, ಲಿಂಗಗಳಲ್ಲಿ ಗಂಡು ಮತ್ತು ಹೆಣ್ಣು ಎಂಬ ಲಿಂಗ ಬೇಧವನ್ನು ಹುಟ್ಟುಹಾಕಿ ಹಲವು ದೇಶ ಕಾಲಘಟ್ಟಗಳಲ್ಲಿ ಈ ಎರಡುಲಿಂಗಗಳ ಬಗ್ಗೆ ಅನೇಕ ವ್ಯಾಖ್ಯಾನಗಳನ್ನು ವಿವಿಧ ಸಂಸ್ಕೃತಿ ಪರಂಪರೆ, ಶಾಸ್ತ್ರ ಮತ್ತು ವಿದ್ವಾಂಸರು ಮಂಡಿಸುತ್ತಾ ಬಂದಿರುವುದನ್ನು ನಾವು ಅನೇಕ ಸಾಹಿತ್ಯ ಕೃತಿಗಳಲ್ಲಿ ನೋಡುತ್ತೇವೆ.

ಅದೇ ರೀತಿ ಒಂದೇ ಸಮಾಜದಲ್ಲಿದ್ದರೂ ಕೂಡ ವಿಭಿನ್ನ ಜನಾಂಗಗಳ ಮನೋಧರ್ಮ ಆ ಜನರ ಸಂಸ್ಕೃತಿ ಹಾಗೂ ಅವರ ವಿವಿಧ ದೃಷ್ಟಿಕೋನಗಳನ್ನು ಲೋರ್ಕಾ ಮತ್ತು ಕಂಬಾರರು ತಮ್ಮ ನಾಟಕಗಳಲ್ಲಿ ಬಿಂಬಿಸಿದ್ದಾರೆ.

ಲೋರ್ಕಾ ತನ್ನ ಎರ್ಮಾ ನಾಟಕದಲ್ಲಿ ಆದಿವಾಸಿ ಹೆಂಗಸು ಮತ್ತು ನಾಗರೀಕ ಹೆಂಗಸಿನ ಮುಖಾಮುಖಿಯನ್ನು ತಂದಿದ್ದಾನೆ. ಅದೇ ರೀತಿ ಕಂಬಾರರು ಜೋಕುಮಾರಸ್ವಾಮಿ ನಾಟಕದಲ್ಲಿ ಕೆಳವರ್ಗ ಮತ್ತು ಮೇಲ್ವರ್ಗದಲ್ಲಿರುವ ಭಿನ್ನತೆಯನ್ನು ತೋರಿಸಲು ಶಾರಿ ಹಾಗೂ ಗೌಡ್ತಿಯ ಪಾತ್ರಗಳನ್ನು ತಂದಿದ್ದಾರೆ. ಆದಿವಾಸಿ ಹೆಂಗಸಿನ

ಸ್ವಚ್ಛಂದ ಬದುಕಿಗೂ ಎರ್ಮ್ಮಾಳ ಕಟ್ಟಿಹಾಕಿದ ಬದುಕಿಗೂ ಇರುವ ವೈರುಧ್ಯವನ್ನು ತೋರಿಸಲು ಲೋರ್ಕಾ ಈ ಪಾತ್ರಗಳನ್ನು ಬಳಸಿ ಕೊಂಡಿದ್ದಾನೆ.

ಇಲ್ಲಿಕಂಬಾರ ಮತ್ತು ಲೋರ್ಕಾ ಇಬ್ಬರು ಒಂದುಕಡೆ ಸಂಪ್ರದಾಯದ ನಿಗೂಢತೆಯ ಶೋಷಣೆಯನ್ನು ವಿವರಿಸಲು ಶಾರಿ ಮತ್ತು ಆದಿವಾಸಿ ಹೆಂಗಸಿನ ಪಾತ್ರಗಳನ್ನು ತಂದಿರುವುದು ಒಂದು ತಂತ್ರವಾಗಿದೆ. ಇನ್ನೊಂದು ಕಡೆ ಪರಂಪರೆ ಮತ್ತು ಆಧುನಿಕತೆಗಳ ನಡುವಿನ ಸಂಘರ್ಷದ ಸ್ವರೂಪವನ್ನು ವಿಮರ್ಶೆಗೆ ಒಳಪಡಿಸುವುದರ ಮೂಲಕ ಹೆಣ್ಣಿಗೆ ಮುಕ್ತತೆಯ ಒಳದಾರಿಯನ್ನು ತೋರಿಸುವ ಪ್ರಯತ್ನ ಮಾಡಿದ್ದಾರೆ.

ಗೌಡನು ತಾನು ಜಮೀನ್ದಾರ , ಹಣವಂತ ಎಂಬ ಗರ್ವದಿಂದ ಕೆಳವರ್ಗದ ನಿಂಗಿಯನ್ನು ಕೆಣಕಿದಾಗ ಅವಳು ಪ್ರತಿಭಟಿಸುತ್ತಾಳೆ. ಬಸ್ಸಿ ಮತ್ತು ಶಾರಿಯರು ಗೌಡನ ಕೆಟ್ಟ ನಡವಳಿಕೆಯ ಬಗ್ಗೆ ಗೌಡ್ತಿಗೆ ಹೇಳಿದರೂ ಕೂಡ ಇವಳು ತನ್ನ ಗಂಡನ ವ್ಯಕ್ತಿತ್ವವನ್ನೇ ಎತ್ತಿ ಹಿಡಿಯಲು ಪ್ರಯತ್ನಿಸುತ್ತಾಳೆ. ಇವಳು ಸಂಪ್ರದಾಯಕ್ಕೆ ನಿಷ್ಠವಾಗಿ ಅದನ್ನು ಪಾಲಿಸುವ ವ್ಯಕ್ತಿ ಪ್ರತಿನಿಧಿಯಾಗಿ ಕಂಡಬರುತ್ತಾಳೆ. ಎರ್ಮ್ಮಾ ಮತ್ತು ಗೌಡ್ತಿ ಇಬ್ಬರು ತಮಗೆ ತಮ್ಮ ಗಂಡಂದಿರು ಸುಖ ನೀಡುತ್ತಾರೆ ಎಂಬ ಆಶಯ ಇಟ್ಟಕೊಂಡು ಸಮಾಜದ ಕಟ್ಟುಪಾಡಿಗೆ ಒಳಗಾಗಿ ತಮ್ಮ ಕನಸುಗಳನ್ನು ತಾವೇ ಕೊಂದು ಕೊಳ್ಳುತ್ತಾರೆ. ಶಾರಿ ಮತ್ತು ಆದಿವಾಸಿ ಹೆಂಗಸು ತಮಗೆ ಹಿತ ಅನಿಸಿದ ಪುರುಷರೊಡನೆ ಲೈಂಗಿಕ ಸುಖವನ್ನು ಪಡೆಯುತ್ತಾರೆ. ಇವರಿಬ್ಬರ ದೃಷ್ಟಿಕೋನದಲ್ಲಿ ಬದಲಾವಣೆ ಇರುವುದನ್ನು ನಾವು ನೋಡಬಹುದು.

ಜೋಕುಮಾರಸ್ವಾಮಿ ಪೂಜೆಯಿಂದ ಗೌಡ್ತಿಯು ತನಗೆ ಮಕ್ಕಳಾಗುತ್ತವೆ ಎಂಬ ಬಲವಾದ ನಂಬಿಕೆಯನ್ನು ಹೊಂದಿದ್ದಾಳೆ. ಆದುದರಿಂದ ಅವಳು ತನ್ನ ಮನೆಯ ಆಳಾದ ಶಿವಿಯನ್ನು ಶಾರಿ ಮನೆಯಿಂದ ಜೋಕುಮಾರಸ್ವಾಮಿಯನ್ನು ತೆಗೆದುಕೊಂಡು ಬರಲು ಹೇಳಿದಾಗ ಅವಳು ನಿರಾಕರಿಸುತ್ತಾಳೆ. ಗಂಡ ಇರುವವರು ಸೂಳೆಯ ಮನೆಗೆ ಹೋಗಬಾರದೆಂಬ ಸಮಾಜದ ನಿಯಮದಂತೆ ನಡೆದು ಕೊಳ್ಳುತ್ತಾಳೆ. ಆದರೆ ಗೌಡ್ತಿಗೆ ತಾಯ್ತನ ಹಂಬಲ ಹೆಚ್ಚಾಗಿ ಸಮಾಜ ಹೇರಿರುವ ನಿಯಮವನ್ನು ಮುರಿಯುತ್ತಾಳೆ.

ವೇಶ್ಯೆಯರಿಗೆ ಈ ಸಮಾಜದಲ್ಲಿ ಬೆಲೆ ಇಲ್ಲ ಎಂಬುದಕ್ಕೆ ಸಾಕ್ಷಿಯಾಗಿ ಶಾರಿಯ ಪಾತ್ರ ಇಲ್ಲಿ ನಮಗೆ ಗೋಚರವಾಗುತ್ತದೆ. ಆದರೆ ವೇಶ್ಯೆಯರಿಗೂ ಒಂದು ಮನಸ್ಸಿದೆ, ಮರ್ಯಾದೆ ಇದೆ ಎಂದು ಗೌಡ್ತಿಯು ತಿಳಿದಿದ್ದಾಳೆ. ಆದುದರಿಂದ ಗೌಡ್ತಿಯು ಶಾರಿಯನ್ನು ತಾಯಿ ಎಂದು ಸಂಭೋದಿಸುತ್ತಾಳೆ.

ಶಾರಿ : ಕೀಳ ಸೂಳಿಗಿ ನಾಯೀ ಅಂತ ಕರೆಯೋದ ಬಿಟ್ಟ ತಾಯೀ
ಅಂತಿ, ಯಾರವ್ವಾ ನೀನು ?[1]

ಇಲ್ಲಿ ನಾವು ಶಿವಿ ಹಾಗೂ ಗೌಡ್ತಿಯ ವ್ಯಕ್ತಿತ್ವದಲ್ಲಿರುವ ಭಿನ್ನತೆಯನ್ನು ಗಮನಿಸಬಹುದು. ಆದರೆ ಶಾರಿಯಿಂದ ಹಾಗೂ ಆದಿವಾಸಿ ಹೆಂಗಸಿನಿಂದ ತಮ್ಮ ಗಂಡಂದಿರ ನಪುಂಸಕತೆಯನ್ನು ತಿಳಿಯುತ್ತಾರೆ. ಇವರಿಬ್ಬರು ಎರ್ಮಾ ಹಾಗೂ ಗೌಡ್ತಿಯಲ್ಲಿ ಹುದುಗಿಟ್ಟ ಚೈತನ್ಯವನ್ನು ಹೊರತೆಗೆಯುತ್ತಾರೆ. ಆದಿವಾಸಿ ಹಾಗೂ ಶಾರಿಯರಿಗಿರುವ ಮುಕ್ತ ಲೈಂಗಿಕ ಸ್ವಾತಂತ್ರ್ಯ ಎರ್ಮಾ ಹಾಗೂ ಗೌಡ್ತಿಗಿಲ್ಲ. ಇವರಿಬ್ಬರ ನಿಯಂತ್ರಣಗಳು ಹಾಗೂ ಮುಖವಾಡಗಳ ಹಿಂದೆ ಬದುಕ ಬೇಕಿದೆ.

ಮುಕ್ತ ಬದುಕಿನ ಎದುರು ಆಂತರಿಕ ಜಗತ್ತನ್ನು ಹೊರತರುವ ಸಾಧನವಾಗಿ ಲೋರ್ಕಾ ಮತ್ತು ಕಂಬಾರರು ಈ ಆದಿವಾಸಿ ಹೆಂಗಸು ಹಾಗೂ ಶಾರಿಯರನ್ನು ಬಳಸಿಕೊಂಡಿದ್ದಾರೆ.

ಶಾರಿ : ಪೈಲಾ ಗಿರಾಕಿ ಗೌಡ ಬಂದರ ಸೂಳೇರಿಗೆ ಹೆಂಗ ಆಗಬ್ಯಾಡ?
ಸೀರಿ ಗಂಟ ಸಡ್ಲ ಮಾಡಿಕೊಂಡ ಸಡಗರ
ಮಾಡುತಾ ದೇವರ ಕ್ವಾಣೆಗೆ ಹೋದರ ಗೌಡ ಕಂಬಳೀ
ಹೊತ್ತಿಕೊಂಡ ಗೊರಕೀ ಹೊಡೀತಿದ್ದ[2]

ಇದೇ ರೀತಿ ಎರ್ಮಾ ನಾಟಕದಲ್ಲಿ ಆದಿವಾಸಿ ಹೆಂಗಸು ಯುವಾನ್‌ನ ಷಂಡತನವನ್ನು ಬಯಲಿಗೆಳೆಯುತ್ತಾಳೆ.

ಆ. ಹೆಂ. :ತಪ್ಪೆಲ್ಲಾ ನಿನ್ನ ಗಂಡನದೇ
ಅವನ ಅಪ್ಪ ಅಷ್ಟೇ ಯಾಕೆ
ಅವನ ಮುತ್ತಜ್ಜ ಅವರು ಯಾರು ನಿಜವಾದ ಗಂಡಸ್ರುಅಂತ
ತೋರಿಸಿದವ್ರೇ ಅಲ್ಲ. ಅದರಲ್ಲಿ ಯಾರೋ ಒಬ್ಬ ಒಬ್ಬಳನ್ನು
ಬಸುರಿ ಮಾಡ್ದಾ ಅನ್ನೋದೆ ಒಂದು ದೊಡ್ಡ ಪವಾಡ [೩]

ಇವರಿಬ್ಬರು ಅವಿತಿಟ್ಟ ಸತ್ಯವನ್ನು ಹೇಳುವುದರ ಮೂಲಕ ಎರ್ಮಾ ಹಾಗೂ ಗೌಡ್ತಿಯನ್ನು ಬೇರೆ ಪ್ರಪಂಚದ ಕಡೆಗೆ ಚಲಿಸುವಂತೆ ಮಾಡುವುದು ಕಂಡುಬರುತ್ತದೆ. ಇದಕ್ಕೆ ಬದ್ಧವಾಗಿ ಗೌಡ್ತಿಯು ನಡೆಯುತ್ತಾಳೆ. ಆದರೆ ಎರ್ಮಾ ಸಮಾಜದ ಕಟ್ಟಪಾಡಿಗೆ ಹೆದರಿ ಇದರ ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಾಳೆ.

ಯುವಾನ್‌ನ ಕ್ರೌರ್ಯ ಹೇಗಿದೆಯೆಂದರೆ ತನ್ನ ಹೆಂಡತಿ ಹೊರಗೆ ಹೋಗದಂತೆ ಕಣ್ಣಿಡಲು ತನ್ನ ತಂಗಿಯರನ್ನು ನೇಮಿಸುತ್ತಾನೆ. ಸಮಾಜದ ಚೌಕಟ್ಟಿನಲ್ಲಿಯೇ ಬದುಕಬೇಕೆಂಬ ಅಪೇಕ್ಷೆಯುಳ್ಳವನಾಗಿ ಕಂಡುಬರುತ್ತಾನೆ. ಇವರಿಬ್ಬರಲ್ಲಿ ಮೊದಲೇ ಕಂದರವೇರ್ಪಟ್ಟಿದೆ. ಈ ಕಂದರವನ್ನು ಇವನ ತಂಗಿಯರು ಮತ್ತಷ್ಟು ವಿಸ್ತೃತಗೊಳಿಸುತ್ತಾರೆ. ಅವಳನ್ನು ನಿರಂತರ ಬಂದಿಯಾಗಿಡಲು ಪ್ರಯತ್ನಿಸುತ್ತಾರೆ. ಅವರ ವ್ಯಕ್ತಿತ್ವಕ್ಕಾದ ತೀವ್ರ ಹಾನಿಯೆಂದರೆ ಅವನು ಇವಳನ್ನು ಅನುಮಾನಿಸುತ್ತಾನೆಂಬುದು. ಆ ಸಮಾಜವು ಕೂಡ ಯುವಾನ್‌ನನ್ನು ಪ್ರತಿನಿಧಿಸುತ್ತಿರುವಂತೆ ಕಾಣುತ್ತದೆ.

ಹೆಂಗಸು ೧: ಅಷ್ಟಕ್ಕೂ ಅವನೇ ಕಾರಣ. ಗಂಡಸಿಗೆ ಬೇಕಾದ್ದು
ತನ್ನ ಹೆಂಡತಿಯಿಂದ ಸಿಗಲಿಲ್ಲ ಅಂದ್ರೆ ಆಗ ಅವನು
ಬೇರೆ ಕಡೆಗೆ ಕಣ್ಣುಹಾಕೋದೇ ಒಳ್ಳೇದು [೪]

ಸಮಾಜವು ಯಾವಾಗಲೂ ಗಂಡಸಿನ ಪರವಾಗಿಯೇ ಮಾತನಾಡುತ್ತದೆ ಎಂಬುದಕ್ಕೆ ಲೋರ್ಕಾ ಈ ಪಾತ್ರಗಳನ್ನು ಸೃಷ್ಟಿಸಿದ್ದಾನೆ. ಆದರೆ ಸಮಾಜದ ಕೆಲವರು ಹೆಣ್ಣಿನ ನೋವಿಗೆ ಸ್ಪಂದಿಸುತ್ತಾರೆ. ಹಾಗೂ ಹೆಣ್ಣಿನ ಶೋಷಣೆಯ ವಿರುದ್ಧ ಪ್ರತಿಭಟಿಸುತ್ತಾರೆಂಬುದಕ್ಕೆ ಕಂಬಾರರು ಈ ಪಾತ್ರಗಳನ್ನು ಸೃಷ್ಟಿಸಿದ್ದಾರೆ.

ಬಸ್ಸಿ : ಬೀಜ ಬಲಾನ s, ಇಲ್ಲದಿದ್ದರ ದೈವಬಲ ಏನ
ಮಾಡೀತು ? ಹೆಂಗಸಿನ ಹೊಟ್ಟೀ ಮ್ಯಾಲಿನ ಗೆರೀ ಅಳಸಾಕ
ತಾಕತ್ತ ಬೇಕೇನವಾ ! ಬರೀ ಬಾಯ್ಲೆ ಜಬರ ಮಾಡಿದರ ಏನ
ಬಂತು ? [೫]

ಗೌಡ್ತಿಯ ಅಸಹಾಯಕತೆಯನ್ನು ಹಾಗೂ ಮುಗ್ಧತೆಯನ್ನು ದುರುಪಯೋಗ ಮಾಡಿಕೊಳ್ಳುತ್ತಿದ್ದ ಗೌಡನ ಧೋರಣೆಯನ್ನು ಹಾಗೂ ಅವನ ಷಂಡತನ ಬಯಲಿಗೆಳೆಯುತ್ತಾಳೆ.

ಒಂದು ಕಡೆ ಲೋರ್ಕಾ ಕೆಲವು ಪಾತ್ರಗಳ ಮೂಲಕ ಎರ್ಮಾಳ ಬದುಕಿನ ದುಃಸ್ಥಿತಿಯನ್ನು ವರ್ಣಿಸುತ್ತಾ ಮತ್ತೊಂದು ಕಡೆ ಎರ್ಮಾಳಿಗೆ ಎದುರಾಗಿ ಪುರುಷ ಪ್ರಧಾನ ವ್ಯವಸ್ಥೆಯ ಪ್ರತಿನಿಧಿಯಾದ ಯುವಾನ್‌ನ ಕಡೆಗೆ ನಿಂತು ಅವನನ್ನು ಸಮರ್ಥಿಸುವ ಸಮಾಜದ ವ್ಯಕ್ತಿಗಳನ್ನು ಸೃಷ್ಟಿಸಿದ್ದಾನೆ. ಆದರೆ ಪಾತ್ರಗಳಿಗೆ ವಾಸ್ತವದ ಅರಿವಿಲ್ಲದೆ ಪುರುಷ ಪ್ರಧಾನ ವ್ಯವಸ್ಥೆಗೆ ಬೆಂಬಲ ನೀಡುವ ನಿಟ್ಟಿನಲ್ಲಿ ಪಾತ್ರಗಳು ಮಾತನಾಡುವುದು ಕಂಡುಬರುತ್ತದೆ.

ಮಹಿಳೆಗೆ ತಾಯ್ತನವು ಕೌಟುಂಬಿಕ ಹಾಗೂ ಸಾಮಾಜಿಕ ಸ್ಥಾನಮಾನವನ್ನು ನೀಡಿ ಭದ್ರತೆಯ ಭಾವನೆಯನ್ನು ಮೂಡಿಸುತ್ತದೆ. ಮತ್ತು ಸಮಾಜದಲ್ಲಿ ಹೆಣ್ಣು ಹುಟ್ಟುವುದೇ ತಾಯ್ತನಕ್ಕಾಗಿ ಎಂಬ ಕಲ್ಪನೆ ಎರ್ಮಾ ಮತ್ತು ಗೌಡ್ತಿಯಲ್ಲಿ ಮನೆ ಮಾಡಿದೆ. ಮಕ್ಕಳಿಲ್ಲದೆ ಬಂಜೆಯಾದರೆ ಆ ಹೆಣ್ಣಿನ ಬಗ್ಗೆ ಸಮಾಜ ಹೇಗೆ ಪ್ರತಿಕ್ರಿಯಿಸುತ್ತದೆ ಎಂಬುದನ್ನು ಈ ನಾಟಕಗಳಲ್ಲಿ ನೋಡಬಹುದು. ಎರ್ಮಾ ಹಾಗೂ ಗೌಡ್ತಿಯರಿಗೆ ತಾಯ್ತನದ ಸ್ವಂತ ಅನುಭವ ಬೇಕಾಗಿದೆ. ಅವರು ತಮ್ಮ ಸುತ್ತಮುತ್ತ ಬಸಿರಾಗಿರುವ ಹೆಣ್ಣುಗಳನ್ನು ನೋಡಿ ಇನ್ನಷ್ಟು ಯಾತನೆಗೆ ಒಳಗಾಗುತ್ತಾರೆ.

ಎರ್ಮಾ : ನೀನು ಮತ್ತು ಉಳಿದವರು ಎಲ್ಲಾ ಅಚ್ಚಗೆ ಬಿರಿಯುತ್ತಿರುವಾಗ
ಇಲ್ಲಿ ನಾನು ಕಂದಿ ಕಮರಿ ಹೋಗ್ತಿದೀನಿ. ನಾನು ಮತ್ತೆ
ಏನನ್ನು ತಾನೇ ಮಾಡೋಕೆ ಸಾಧ್ಯ ? [೬]

ಇದೇ ರೀತಿಯ ಮನಸ್ಥಿತಿಯನ್ನು ಗೌಡ್ತಿಯು ಹೊಂದಿದ್ದಾಳೆ ಹೆಣ್ಣು ತಾಯಿಯಾಗದಿದ್ದರೆ ಅವಳ ಬದುಕೇ ಶೂನ್ಯ ಎಂಬ ಧೋರಣೆಯನ್ನು ಹೊಂದಿದ್ದಾಳೆ. ತನ್ನ ಹಣೆಬರಹಕ್ಕೆ ದೇವರನ್ನು ನಿಂದಿಸುತ್ತಾಳೆ.

ಗೌಡ್ತಿ : ಓಡಿಹೋಗೋ ಮಕ್ಕಳನ್ನು ನೋಡಿ ಎದಿ
ಬೆವರಿತು. ಅಂಗಳದಾಗ ಹುರಗಡ್ಲಿ ಚೆಲ್ಲಿ
ತಲೀಮ್ಯಾಲ ಕೈಹೊತ್ತ 'ಶಿವನ ಏನ ಹೆಣ್ಣಿನ ಜನ್ಮ ?' ಅಂದೆ [೭]

ಮಕ್ಕಳಾಗದಿದ್ದರೆ ಈ ಜನ್ಮದಲ್ಲಿ ನಮಗೆ ಮೋಕ್ಷವೇ ದೊರೆಯದೆಂದು ನಂಬಿರುವ ಎರ್ಮಾ ಮತ್ತು ಗೌಡ್ತಿ ಒಂದು ಕಡೆಯಾದರೆ ಮಕ್ಕಳಿಲ್ಲದಿದ್ದರೆ ಜೀವನ ಎಷ್ಟು ಚೆನ್ನಾಗಿರುತ್ತದೆ ಎಂಬ ಧೋರಣೆಯನ್ನು ಹುಡುಗಿ-೨ ಹೊಂದಿದ್ದಾಳೆ. ಇವರಿಬ್ಬರೂ ಒಂದೇ ಕಾಲಘಟ್ಟದಲ್ಲಿದ್ದರೂ ಕೂಡ ಇವರಿಬ್ಬರ ವ್ಯಕ್ತಿತ್ವದಲ್ಲಿ ಹಲವು ಭಿನ್ನತೆಗಳಿರುವುದನ್ನು ನೋಡಬಹುದು.

ಹುಡುಗಿ -೨ : ಆದರೆ ನಮ್ಮಿಬ್ಬರಿಗೂ ಮಕ್ಕಳಿಲ್ಲ. ಹಾಗಾಗಿ ಬದುಕು
ಸೊಗಸಾಗಿದೆ ನಿಸೂರಾಗಿದೆ
ಎರ್ಮಾ : ನಿಸೂರು ? ನನಗಂತೂ ಇಲ್ಲ. [೮]

ಎರ್ಮಾ ಶ್ರೀಮಂತೆಯಾದರೂ ಕೂಡ ತನ್ನ ಜೀವನವನ್ನು ಪ್ರಾಯೋಗಿಕವಾಗಿ ಯೋಚಿಸುವುದಿಲ್ಲ. ಆದರೆ ಹುಡುಗಿ-೨ ಕೆಳವರ್ಗಕ್ಕೆ ಸೇರಿದವಳಂತೆ ಕಾಣುತ್ತಾಳೆ. ಅವಳಿಗೆ ಮಕ್ಕಳಿಲ್ಲದಿದ್ದರೂ ಕೂಡ ತನ್ನ ಬದುಕಿಗೆ ಒಂದು ಅರ್ಥವಿದೆ ಎಂದು ನಂಬಿದ್ದಾಳೆ. ಎರ್ಮಾ ಸಮಾಜಕ್ಕೆ ಹೆದರಿ ಅದನ್ನು ಪಾಲಿಸುವ ವ್ಯಕ್ತಿಯಾಗಿ ಕಂಡುಬಂದರೆ ಹುಡುಗಿ-೨ ಅದೇ ಸಮಾಜಕ್ಕೆ ಹೆದರದೆ ಧೈರ್ಯವಾಗಿ ನಿಭಾಯಿಸುವ ಹೆಣ್ಣಾಗಿ ಕಂಡುಬರುತ್ತಾಳೆ

ನಾವು ಈ ನಾಟಕಗಳಲ್ಲಿ ಬಸಣ್ಣ ಹಾಗೂ ಗೌಡ ವಿಕ್ಟರ್ ಹಾಗೂ ಯುವಾನ್‌ರಲ್ಲಿ ಹಲವು ವ್ಯಕಿತ್ತ್ವದ ಭಿನ್ನತೆಗಳನ್ನು ಗಮನಿಸಬಹುದು. ಇಲ್ಲಿ ಎರ್ಮಾ ಹಾಗೂ ಗೌಡ್ತಿಯ ಸಹಜ ಸ್ಪೂರ್ತಿಗೆ ಸ್ಪಂದಿಸುವ ವಿಕ್ಟರ್ ಹಾಗೂ ಬಸಣ್ಣ ಒಂದು ಕಡೆಯಾದರೆ, ಇವರ ಚೈತನ್ಯಕ್ಕೆ ಸ್ಪಂದಿಸಲಾರದ ಗೌಡ ಹಾಗೂ ಯುವಾನ್‌ರನ್ನು ಕಾಣಬಹುದು. ಇಲ್ಲಿ ಬಸಣ್ಣನು

'' ನಾನು ಒಲ್ಲೆನೋ ಹೆಣ್ಣ ಎಳದಾವಲ್ಲ' ಎಂದು ಹೇಳುತ್ತಾನೆ. ಗೌಡನು ಊರಿನ ಎಲ್ಲಾ ಹುಡುಗಿಯುರನ್ನು ಬಲವಂತವಾಗಿಯಾದರೂ ತಾನೇ ಅನುಭವಿಸಬೇಕೆಂಬ ಧೋರಣೆಯಿಂದ ಕೂಡಿದ್ದರೆ ಬಸಣ್ಣನು ತನ್ನನ್ನು ಇಷ್ಟಪಟ್ಟ ಹೆಣ್ಣಿನೊಂದಿಗೆ ಮಾತ್ರ ತಾನು ಕೂಡುತ್ತೇನೆ ಎಂದುಹೇಳುತ್ತಾನೆ. ಇವನು ಗೌಡನ ದೌರ್ಜನ್ಯವನ್ನು ಬಯಲಿಗೆಳೆಯುತ್ತಾನೆ. ಹಾಗೂ ನಿಜಸಂಗತಿಯನ್ನು ಗೌಡ್ತಿಗೆ ಹೇಳಿ ಅವಳಿಗೆ ಜ್ಞಾನೋದಯವಾಗುವಂತೆ ಮಾಡುತ್ತಾನೆ.

ಅದೇ ರೀತಿ ವಿಕ್ಟರ್ ಕೂಡಾ ಎರ್ಮಾಳಿಗೆ ಯುವಾನ್‌ನ ಕ್ರೌರ್ಯವನ್ನು ತಿಳಿಸುತ್ತಾನೆ. ಹಾಗೂ ಇವಳು ಜೀವನದಲ್ಲಿ ಚೆನ್ನಾಗಿರಬೇಕೆಂದು ಬಯಸಿ ಮತ್ತೆ ಅವನು ತನ್ನ ಊರಿಗೆ ಹಿಂತಿರುಗಿ ಹೋಗಬೇಕೆಂದು ತೀರ್ಮಾನಿಸುತ್ತಾನೆ. ಇಲ್ಲಿ ಯುವಾನ್ ಮತ್ತು ಗೌಡ ತಮ್ಮ ಹೆಂಡತಿಯರು ತಮಗೆ ಅಡಿಯಾಳಾಗಿ ಇರಬೇಕು. ಅವರು ಎಂದಿಗೂ ಸ್ವತಂತ್ರ ಬಯಸಬಾರದೆಂಬ ಅಪೇಕ್ಷೆವುಳ್ಳವರಾದರೆ ಇವರ ಸ್ವತಂತ್ರವನ್ನು ಬಯಸುವ ಗಂಡುಗಳಾಗಿ ಬಸಣ್ಣ ಹಾಗೂ ವಿಕ್ಟರ್ ಕಂಡುಬರುತ್ತಾರೆ.

ತಮ್ಮ ಹಣ ಆಸ್ತಿಯ ಮೂಲಕ ಎಲ್ಲರನ್ನೂ ಗೆದ್ದು ತನ್ನ ಅಧಿಕಾರ ಕೇಂದ್ರಿತದಡಿಯಲ್ಲಿ ಇಟ್ಟುಕೊಳ್ಳಬಹುದು ಎಂಬ ಗೌಡನ ಹಾಗೂ ಯುವಾನ್‌ನ ತಪ್ಪು ಕಲ್ಪನೆಯನ್ನು ಬಸಣ್ಣ ಹಾಗೂ ವಿಕ್ಟರ್ ಒಡೆದು ಎಲ್ಲರಿಗೂ ಸಮಾನತೆಯನ್ನು ಗುರುತಿಸುವ ಪ್ರಯತ್ನಮಾಡಿದ್ದಾರೆ. ಒಂದೇ ಪ್ರದೇಶದಲ್ಲಿ ವಾಸವಿದ್ದರೂ ಕೂಡ ವ್ಯಕ್ತಿತ್ವದಲ್ಲಿರುವ ಭಿನ್ನತೆಯನ್ನು ಗುರುತಿಸಲು ಲೋರ್ಕಾ ಹಾಗೂ ಕಂಬಾರರು ಈ ಪಾತ್ರಗಳನ್ನು ತಮ್ಮ ನಾಟಕದಲ್ಲಿ ತಂದಿದ್ದಾರೆ. ನಾವು ಇಲ್ಲಿ ನಾಟಕಕಾರರ ವಿಭಿನ್ನ ಸಂಸ್ಕೃತಿಯ ಚಿಂತನೆಯನ್ನು ನೋಡಬಹುದು.

## ಅಡಿಟಿಪ್ಪಣಿಗಳು

೧. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೩೩

೨. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೩೬

೩. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೬೪

೪. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೨೮

೫. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೮

೬ ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೪೦

೭. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೯

೮. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೧೮

# ಅಧ್ಯಾಯ -೬

## ವರ್ಗ ಸಂಘರ್ಷ-ಸ್ತ್ರೀವಾದೀ ಹಿನ್ನೆಲೆಯಲ್ಲಿ

ಪ್ರಾಚೀನ ಅಥವಾ ಮಧ್ಯಕಾಲೀನ ಭಾರತ ಒಂದು ಶ್ರೇಣೀಕೃತವಾದ ವ್ಯವಸ್ಥೆಯಿಂದ ಕೂಡಿತ್ತು. ಈಗಲೂ ಇದರ ಚಹರೆಯನ್ನು ನಾವು ಕಾಣಬಹುದು. ಇದಕ್ಕೆ ಬೇರೆ ರಾಷ್ಟ್ರಗಳೂ ಕೂಡ ಹೊರತಾಗಿಲ್ಲ. ಜಗತ್ತಿನಲ್ಲಿ ಒಂದು ವರ್ಗದ ವಿರುದ್ಧ ಮತ್ತೊಂದು ವರ್ಗ ತನ್ನ ಹಿತಾಸಕ್ತಿಗಾಗಿ ಸ್ವಾಭಿಮಾನದಿಂದ ಪ್ರತಿಭಟಿಸುವುದನ್ನು'ವರ್ಗ ಸಂಘರ್ಷ'ಎಂದು ಕರೆಯುತ್ತೇವೆ. ಒಂದು ಸಮಾಜದ ವಿವಿಧ ವಲಯಗಳನ್ನು ವರ್ಗ ಎನ್ನಬಹುದು. ಇವುಗಳ ಜೊತೆಗೆ ಉಪ ವರ್ಗಗಳು ಸೇರುತ್ತವೆ. ಮೇಲ್‌ವರ್ಗ, ಮೇಲ್ ಮಧ್ಯಮ ವರ್ಗ, ಮಧ್ಯಮ ವರ್ಗ, ಕೆಳಮಧ್ಯಮ ವರ್ಗ ಈ ವರ್ಗಗಳು ಆರ್ಥಿಕ ಮತ್ತು ಸಾಮಾಜಿಕವಾಗಿ ಭಿನ್ನವಾದ ಲಕ್ಷಣವನ್ನು ಹೊಂದಿರುತ್ತದೆ.ಸಮಾಜದಲ್ಲಿ ವರ್ಗಗಳು ಮೇಲ್ಮುಖವಾಗಿ ಚಲಿಸಲು ಪ್ರಯತ್ನಿಸುತ್ತವೆ. ಅಂದರೆ ಕೆಳವರ್ಗ ಮಧ್ಯಮ ವರ್ಗವಾಗಲು ಪ್ರಯತ್ನಿಸಿದರೆ, ಮಧ್ಯಮವರ್ಗ ಮೇಲ್ ವರ್ಗಕ್ಕೆ ಏರಲು ಪ್ರಯತ್ನಿಸುತ್ತವೆ.ಆದರೆ ಈ ಎಲ್ಲಾ ವರ್ಗಗಳನ್ನು ಮೇಲ್‌ವರ್ಗ ತನ್ನ ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಪ್ರಯತ್ನ ನಡೆಸುತ್ತದೆ. ಶ್ರೇಣಿ, ಕೌಟುಂಬಿಕ ಪರಂಪರೆ, ಉದ್ಯೋಗ, ಬಡತನ, ಇವುಗಳ ಆಧಾರದ ಮೇಲೆ ವರ್ಗವನ್ನು ಸ್ಥೂಲವಾಗಿ ವಿಭಾಗ ಮಾಡಲಾಗಿದೆ.

ಸಮಾಜದ ಪ್ರತಿಯೊಂದು ಸ್ಥರಗಳಲ್ಲಿ ಮೇಲ್‌ವರ್ಗದವರಿಗೆ ಮುಕ್ತತೆಯ ಅವಕಾಶವಿದ್ದರೆ ಅವರ ಅಧಿಕಾರದಲ್ಲಿ ನಿಯಂತ್ರಣ ನಿರ್ಬಂಧತೆಗೆ ಕೆಳವರ್ಗದವರು ಒಳಪಟ್ಟಿರುವುದು ಕಾಣುತ್ತದೆ.

ಇಂತಹ ದುಡಿಯುವ ವರ್ಗದ ಸಂವೇದನೆಗಳಿಗೆ ಸ್ಪಂದಿಸುವ ಅನೇಕ ಕ್ರಾಂತಿ, ಸಾಹಿತ್ಯ, ಚಳುವಳಿಗಳು ಪ್ರಪಂಚಾದಾದ್ಯಂತ ನಡೆದಿದೆ. ಇದರ ಪ್ರಭಾವದಿಂದ ರೈತರು ಹಾಗೂ ದುಡಿಯುವ ಕಾರ್ಮಿಕ ಸಂಘಟನೆಗೊಂಡು ಬಂಡವಾಳ ಶಾಹಿ ವ್ಯವಸ್ಥೆಯನ್ನು ವಿರೋಧಿಸಿದರು.

ಸಮಾಜದ ಕೆಲವರು ತಮ್ಮ ಹೆಚ್ಚಿನ ಶಕ್ತಿ ಬುದ್ದಿಮತ್ತೆಗಳನ್ನು ಸ್ವಾರ್ಥಕ್ಕಾಗಿ ಬಳಸಿ ದುರ್ಬಲರನ್ನು ಆಳುವ ತಂತ್ರ ಹೂಡಿಟ್ಟಿದ್ದು ನಿಜ. ಆದರೆ ಇವರಷ್ಟೇ ಹೆಚ್ಚಿನ ಶಕ್ತಿ ಬುದ್ಧಿ ಮತ್ತೆಗಳನ್ನು ಹೊಂದಿದ ಮತ್ತೆ ಕೆಲವರು ಇಂಥಾ ಆಕ್ರಮಣಗಳನ್ನು ತಡೆಯುವ ಯತ್ನ ಮಾಡಿರುವ ಕತೆಯೇ ನಮ್ಮೊಂದಿಗಿದೆ.

ಇದೇ ರೀತಿ ಚಂದ್ರಶೇಖರ ಕಂಬಾರರ ಜೋಕುಮಾರಸ್ವಾಮಿ ನಾಟಕದಲ್ಲಿ ಗೌಡನು ತನ್ನ ಸ್ವಾಥಕ್ಕಾಗಿ ಕೆಳವರ್ಗದವರನ್ನು ತನ್ನ ಹಿಡಿತದಲ್ಲಿಟ್ಟು ಕೊಂಡಿರುವುದನ್ನು ಬಸಣ್ಣ ಹಾಗೂ ನಿಂಗಿ ತಡೆಯುವ ಯತ್ನ ಮಾಡಿರುವುದನ್ನು ನಾವು ಈ ನಾಟಕದಲ್ಲಿ ನೋಡಬಹುದು.

ಈ ನಾಟಕದಲ್ಲಿ ಕಂಬಾರರು ಊಳಿಗಮಾನ್ಯ ವ್ಯವಸ್ಥೆಯನ್ನು ನಾಶಗೊಳಿಸಿ ಸಮಾನತೆಯನ್ನಾಧರಿಸಿದ ಹೊಸ ವ್ಯವಸ್ಥೆಯನ್ನು ತರಲು ಪ್ರಯತ್ನಿಸಿದ್ದಾರೆ. ಲೋರ್ಕಾನಿಗಿಂತ ಕಂಬಾರರು ವರ್ಗಸಂಘರ್ಷವನ್ನು ತಮ್ಮ ನಾಟಕದಲ್ಲಿ ಬಿಂಬಿಸಿದ್ದಾರೆ. ಊಳಿಗಮಾನ್ಯ ವ್ಯವಸ್ಥೆಯ ಎಲ್ಲಾ ದುಷ್ಟ ಗುಣಗಳಿಗೆ ಪ್ರತಿನಿಧಿಯಾಗಿ ಗೌಡ ಕಂಡು ಬಂದರೆ ಪ್ರಜಾಪ್ರಭುತ್ವ ಹಾಗೂ ಸಮಾಜವಾದದ ಪ್ರತಿನಿಧಿಯಾಗಿ ಬಸಣ್ಣ ಹಾಗೂ ನಿಂಗಿ ಕಂಡು ಬರುತ್ತದೆ. ಈ ನಾಟಕವು ಕಾರ್ಲ್‌ಮಾರ್ಕ್ಸ್‌ನ ಪ್ರಖ್ಯಾತ ಹೇಳಿಕೆಯಾದ ಉಳುವವನೆ ಭೂಮಿಯ ಒಡೆಯ ' ಎಂಬ ಜನಪ್ರಿಯ ಘೋಷಣೆಯ ಮೇಲೆ ರಚಿತವಾಗಿದೆ.

ಈ ನಾಟಕದಲ್ಲಿ ಗೌಡನ ಸ್ವಪ್ರತಿಷ್ಠೆ, ಅಹಂಕಾರ ಕ್ರೌರ್ಯವನ್ನು ನಾವು ನೋಡಬಹುದು. ಇವನು ತನ್ನ ಅಧಿಕಾರದಿಂದ ಊರಿನ ಹೆಣ್ಣುಗಳನ್ನೇ ತಾನೇ ಅನುಭವಿಸಬೇಕೆಂಬ ಧೋರಣೆಯನ್ನು ಹೊಂದಿದ್ದಾನೆ.

ಮೇಳ : ಊರ ಭೂಮಿ ಸೀಮಿಯ ಯಜಮಾನ
ಬಂಗಾರ ಬೆಳ್ಳಿ ಚಿನ್ನ
ಚೆಂದುಳ್ಳಿ ನಿವಳ ಹೆಣ್ಣಾ
ಎಲ್ಲಾನು ತನ್ನದಂತ ಹೇಳ್ಯಾನ್ರಿ ಹೈವಾನ [1]

ಗೌಡನು ಊರಿನ ಸುತ್ತಮುತ್ತ ಇರುವ ಎಲ್ಲಾ ಜಮೀನಿನ ಮಾಲೀಕನಾಗಿದ್ದಾನೆ. ಇದನ್ನೆಲ್ಲಾ ಅವನು ಕಷ್ಟಪಟ್ಟು ಸಂಪಾದನೆ ಮಾಡಿದ್ದಲ್ಲ, ಸಾಮಾನ್ಯ ಅಥವಾ ಪಿತ್ರಾರ್ಜಿತ ಆಸ್ತಿಯೂ ಅಲ್ಲ. ಆದರೆ ಇವನು ಸಾಮಾನ್ಯ ರೈತ ಜನರ ಮೇಲೆ ಆಕ್ರಮಣ ಮಾಡಿ ಬಲವಂತದಿಂದ ಪಡೆದು ಕೊಂಡಿದ್ದಾನೆ. ಇಲ್ಲಿ ಗೌಡ ಬಂಡವಾಳ ಶಾಹಿ ಧೋರಣೆಯನ್ನು ಅನುಸರಿಸಿದ್ದಾನೆ. ಕೆಳವರ್ಗದ ದುಡಿಯುವ ವರ್ಗದ ಪ್ರತಿನಿಧಿಯಾಗಿ ಬಸಣ್ಣ, ಗುರ್‍ರ್ಯಾ, ನಿಂಗಿ ಇತರರು ಕಂಡುಬರುತ್ತಾರೆ.

ಭೂಮಿಯ ಮೇಲಿನ ಅತಿಯಾದ ವ್ಯಾಮೋಹದಿಂದಾಗಿ ಗೌಡ ಅವನ ವಿರುದ್ಧ ತಿರುಗಿ ಬಿದ್ದವರನ್ನು ಕೊಲ್ಲುತ್ತಿರುತ್ತಾನೆ. ಇದು ನಮ್ಮ ವ್ಯವಸ್ಥೆಯ ದೌರ್ಬಲ್ಯವನ್ನು ಸೂಚಿಸುತ್ತದೆ. ಅಂದಿನ ಸಮಾಜ ಕೆಳಜಾತಿಯವರನ್ನು ನಡೆಸಿಕೊಳ್ಳುತ್ತಿದ್ದ ರೀತಿಯನ್ನು ನಾವು ನೋಡಬಹುದು.

ಇನ್ನೊಬ್ಬ : ಯುದ್ಧದೊಳಗ ಸೈನಿಕರು ಬರೀ ಹೆಣದ ಮ್ಯಾಲ
ಹಾರಸ್ತಾರಂತ ನಮ್ಮ ದೇವರು ಉಹೂ ! ಗಟ್ಟಿಮುಟ್ಟ
ಬಾಳೇವಂತರ ಆಗಬೇಕು. ಒಂದು ದಿವಸ ಒಬ್ಬ ರೋಗಿಷ್ಟನ
ಮ್ಯಾಲ ಹಾರಿದರು - ಅದೆಲ್ಲೋ ?[1]

ಇಲ್ಲಿ ಇವರು ಉಪಯೋಗಿಸುವ ರೋಗಿಷ್ಟ ಎಂಬ ಪದ ಗೌಡನ ಮಾತನ್ನುಯಾರು ಕೇಳುವುದಿಲ್ಲವೋ ಅವರೇ ರೋಗಿಗಳು ಎಂಬ ಧೋರಣೆಯಿಂದ ಕೂಡಿದೆ. ಇಲ್ಲಿ ಗೌಡ ತಾನೇ ತುಂಬಾ ಆರೋಗ್ಯವಂತನಾಗಿ ಚಿತ್ರಿಸಿ ಕೊಂಡರೆ ಉಳಿದವರೆಲ್ಲರೂ ರೋಗಿಷ್ಟರಾಗಿ ಇವನಿಗೆ ರೋಗಿಷ್ಠರಾಗಿ ಕಂಡುಬರುತ್ತಾರೆ. ರೋಗಿಷ್ಟರನ್ನು ಕೊಲ್ಲುವುದೇ ಇವನ ಪರಮ ಗುರಿ ಇದ್ದಂತಿದೆ.

ಗೌಡ : ಮುದುಕ ಭಾರೀ ಹಟಮಾರಿ, ಒಬ್ಬರ ಮಾತ ಕೇಳಾವಲ್ಲ
ಗಿಣೇಗಿ ಹೇಳಿದಾಂಗ ಹೇಳಿದೆ; ಮುದುಕಾ ಆ ಹೊಲದಾಗ
ಮಲಗಬ್ಯಾಡೊ ಅಂತ ಕೇಳಿದನ ನನ್ನ ಮಾತ ?[2]

ಅಂದರೆ ಇವನ ಮಾತನ್ನು ಕೇಳದೇ ಹೋದರೆ ಅವರಿಗೆ ಸಾವೇ ಗತಿ ಎಂಬುದನ್ನು ತೋರಿಸಿದ್ದಾನೆ. ತಾನೇ ಸರ್ವಾಧಿಕಾರಿಯ ರೀತಿ ವರ್ತಿಸುತ್ತಾನೆ. ಅವನ ಅಧಿಕಾರವನ್ನು ಯಾರು ಪ್ರಶ್ನೆಯೇ ಮಾಡುವುದಿಲ್ಲವೆಂಬ ಧೋರಣೆಯಿಂದ ಕೂಡಿದ್ದಾನೆ. ಆದರೆ ಇವನ ಧೋರಣೆಯನ್ನು ಬಸಣ್ಣ ತಲೆಕೆಳಗು ಮಾಡುತ್ತಾನೆ. ದುರಾಸೆಯ ಭೂ - ಒಡೆತನದ ವ್ಯವಸ್ಥೆಯನ್ನು ಛಿದ್ರಗೊಳಿಸುತ್ತಾನೆ. ದುಡಿಯುವವನಿಗೆ ಭೂಮಿಯ ಸಹಜ ಅಧಿಕಾರವಿದೆ. ಎಂಬುದನ್ನು ಸಾಬೀತು ಪಡಿಸುತ್ತಾನೆ.

> ಬಸಣ್ಣ : ಒಂದು ಗಟ್ಟಿಮುಟ್ಟ ಮಾತ ಹೇಳತೀನಿ ಕೇಳ ಗೌಡ ನಮ್ಮಪ್ಪ
> ಹೆಂಗ ಸತ್ತಂತ ನನಗೆಗೊತ್ತೈತಿ ಕಾಡಕಡಬಿ ಹೆಂಗ ಹೊಲಾ
> ಮಾಡಿದಾಂತ ಗೊತ್ತೈತಿ ಆ ಹೊಲಾ ನಾ ಬಿಡಾಣಿಲ್ಲಂತ ನನಗ
> ಗೊತ್ತೈತಿ [೪]

ಊರಿನ ಗೌಡನಾದರೂ ಅವನಿಗೆ ಹೆದರದೆ ಬಸಣ್ಣ ತನ್ನ ಹಕ್ಕಿಕೋಸ್ಕರ ಪ್ರತಿಭಟಿಸುತ್ತಾನೆ. ಹಾಗೂ ಊರವರ ಕ್ರಾಂತಿಗೆ ದಂಗೆಯೇಳುವಂತೆ ಪ್ರೇರೇಪಿಸುತ್ತಾನೆ. ಊಳಿಗಮಾನ್ಯ ವ್ಯವಸ್ಥೆಯು ಎಷ್ಟು ಬಲಿಷ್ಠವಾಗಿದೆ ಎಂಬುದನ್ನು ನಾವು ಗೌಡನ ಮಾತಿನಿಂದ ತಿಳಿಯಬಹುದಾಗಿದೆ. ಈ ವ್ಯವಸ್ಥೆಯ ಬೇರುಗಳ ಎಷ್ಟು ಪ್ರಬಲವಾಗಿ ಬೇರೂರಿದೆ. ಇದನ್ನು ನಿರ್ನಾಮ ಮಾಡಲು ಬಲವಾದ ಶಕ್ತಿ ಬೇಕು. ಇದು ಒಬ್ಬರಿಂದ ಸಾಧ್ಯವಿಲ್ಲ. ಹಲವರ ನೆರವು ಬೇಕಾಗುತ್ತದೆ ಎಂಬುದನ್ನು ಕಂಬಾರರು ಪರೋಕ್ಷವಾಗಿ ಹೇಳಿದ್ದಾರೆ.

> ಗೌಡ : ಹಾಂಗಿದ್ದರ ನೀ ಹೇಳೋದು ನನಗೊತ್ತಿಲ್ಲಾ ಏನ
> ಹೇಳೋದೆಲ್ಲಾ ಈ ಬಂದೂಕಿಗೆ ಹೇಳ [೫]

ಇಲ್ಲಿ ಗೌಡನಿಗೆ ತೋಳಿನಲ್ಲಿಲ್ಲದ ಶಕ್ತಿಯನ್ನು ಬಂದೂಕಿನ ಬಲದಿಂದ ಹಣದಿಂದ ಗಳಿಸುವ ದುಷ್ಟಶಕ್ತಿಯನ್ನು ನೋಡಬಹುದು. ಗೌಡನ ಇಡೀ ವ್ಯಕ್ತಿತ್ವವನ್ನು ಈ ಬಂದೂಕಿನಿಂದಲೇ ನಿರ್ಧರಿಸಬಹುದು.

ಗೌಡನು ದುಡಿಯುವ ವರ್ಗದ ಅಸಹಾಯಕತೆಯನ್ನು ದುರ್ಬಳಕೆ ಮಾಡಿಕೊಂಡು ತಾನು ಸರ್ವಾಧಿಕಾರಿಯ ರೀತಿ ವರ್ತಿಸುತ್ತಾನೆ. ಇವನ ಈ ಸರ್ವಾಧಿಕಾರವನ್ನು ಯಾರುಪ್ರಶ್ನಿಸದ ರೀತಿ ಹಾಗೂ ಪ್ರಶ್ನಿಸಿದರೆ ಅವರನ್ನು ಶಿಕ್ಷಿಸುವ ರೀತಿ ನೋಡಿದರೆ ಇವನೊಬ್ಬ ಆ ಸಮಾಜ ವ್ಯವಸ್ಥೆಯ ಕ್ರೂರ ವ್ಯಕ್ತಿಯ ರೀತಿ ಗೋಚರಿಸುತ್ತಾನೆ.

ಗೌಡ : ಬಾರೋಗುರ್ರ್ಯಾ, ಏ ಏ ಕುರಿ ಹೆದರತೈತಿ ಹೋಗ್ರೋ.[೬] ಬಡತನದಲ್ಲಿದ್ದುಕೊಂಡೇ ಶ್ರೀಮಂತರ ಸೇವೆ ಮಾಡಿ ಬದುಕುವುದೇ ಪರಮಗುರಿ. ಇದಿಲ್ಲದೇ ಹೋದರೆ ಈ ಜನ್ಮ ಸಾರ್ಥಕವಿಲ್ಲ ಎಂದು ತಿಳಿದಿದ್ದ ಗುರ್ರ್ಯಾನು ಬಸಣ್ಣನಿಂದ ಪ್ರೇರಣೆಪಡೆದು ಗೌಡನ ದೌರ್ಜನ್ಯವನ್ನು ಪ್ರಶ್ನಿಸುತ್ತಾನೆ. ಆದರೆ ಅವನ ಬಂದೂಕಿಗೆ ಹೆದರಿ ಮತ್ತೆ ಗೌಡನ ಕ್ರೌರ್ಯವನ್ನು ಒಪ್ಪಿಕೊಂಡು ಬಿಡುತ್ತಾನೆ.

ಗುರ್ರ್ಯಾ : (ಏನು ಹೇಳುವುದಕ್ಕೂ ತೋಚದೆ) ಯಾಕಿಲ್ಲರೀ, ಯಾಕಂದರ ನಿಮ್ಮ ಕಾಲ ತಿಕ್ಕಾಕ ಬಂದಿದ್ದೆ.[೭]

ಏಂಗೆಲ್ಸ್‌ರವರು ದುಡಿಯುವ ವರ್ಗವನ್ನು ಕುರಿತು ಈ ರೀತಿ ಹೇಳುತ್ತಾರೆ. ''ದುಡಿಯುವವರಿಗೆ ಬಂಡವಾಳಿಗನು ದಯಪಾಲಿಸುವ ಜೀವನದ ಅವಧಿ ಹೆಚ್ಚಿನದೇನೂ ಅಲ್ಲ. ಅವನ ದುಡಿಮೆಯ ಲಾಭ ಬಂಡವಾಳಿಗನಿಗೆ ದಕ್ಕುವವರೆಗೆ ಅವರು ಜೀವಂತವಾಗಿದ್ದರೆ ಸಾಕು ಎನ್ನುತ್ತಾನೆ. ಬಂಡವಾಳಶಾಹಿ ಉತ್ಪಾದನಾ ವಿಧಾನದಲ್ಲಿ ದುಡಿಮೆಗೆ ದಕ್ಕುವ ಪ್ರತಿಫಲ ಯಾವಾಗಲೂ ಕಡಿಮೆ ಮಟ್ಟದಲ್ಲೇ ಇರುತ್ತದೆ ಎಂಬುದನ್ನು ಗಮನಿಸಿದಾಗ ದುಡಿಯುವ ವರ್ಗದ ದಮನ , ಶೋಷಣೆ, ಅನ್ಯಾಯ ಮತ್ತು ಜಾತಿ ವ್ಯವಸ್ಥೆಗಳಿಂದ ತುಂಬಾ ಸಂಕಷ್ಟಕ್ಕೆ ಒಳಗಾಗಿ ಸಮಾಜದಲ್ಲಿ ಹಿಂಸೆಯನ್ನು ಅನುಭವಿಸುವುದು ಕಂಡುಬರುತ್ತದೆ.''[೮]

ಇದೇ ರೀತಿಯ ಹಿಂಸೆಗೆ ಗುರ್ರ್ಯಾ ಒಳಗಾಗುತ್ತಾನೆ.ಇವನ ಕುರಿ ಮತ್ತು ಹೊಲಗಳನ್ನು ಗೌಡ ನುಂಗುತ್ತಿದ್ದರೂ ಕೂಡ ಅಸಹಾಯಕನಾಗಿ ನೋಡುತ್ತಿರುತ್ತಾನೆ. ಗೌಡನ ಶೋಷಣೆಯನ್ನು ಮೌನವಾಗಿ ಸಮ್ಮತಿಸುತ್ತಾನೆ. ಗೌಡ ಇವನನ್ನು 'ನಾಯೀ ಮಗನ' ಎಂದು ಕರೆದರೂ ಕೂಡ ನಾಯಿಯ ಹಾಗೆ ಸ್ವಾಮಿ ನಿಷ್ಠೆಯನ್ನು ತೋರಿಸುತ್ತಾನೆ. ಹಾಗೆ ಸ್ವಲ್ಪ ಬಗ್ಗಿ ನಿಲ್ಲೋ ಎಂದರೆ ಬಗ್ಗಿ ನಿಲ್ಲುತ್ತಾನೆ. ಅವನ ಮೇಲೆಯೇ ಗೌಡ

ಕೂತುಕೊಂಡು ಸವಾರಿ ಮಾಡುತ್ತಾನೆ. ಬಡತನ ಎಂಬುದು ಜನರನ್ನು ಹೇಗೆ ಅಸಹಾಯಕರನ್ನಾಗಿ ಮಾಡುತ್ತದೆ ಎಂಬುದನ್ನು ಗುರ್ಯಾನ ಮಾತಿನಲ್ಲೇ ಕೇಳಬಹುದು.

ಗುರ್ಯಾ : ಮಿತ್ರಾ ಬಸಣ್ಣಾ, ಏನ್ಹೇಳಲಿ ? ಬಡತನ ಶಾಪ ಹೌಂದೋ
ಅಲ್ಲೋ, ವರಾ ಅಂತೂ ಅಲ್ಲಪ್ಪಾ? [६]

ದಬ್ಬಾಳಿಕೆ, ಭ್ರಷ್ಟತೆ, ನಿಯಂತ್ರಣ ವ್ಯವಸ್ಥೆಯು ಹೇಗೆ ಜನರನ್ನು ಮಾತು ಬಾರದ ಮೂಕರನ್ನಾಗಿ ಮಾಡಿಬಿಡುತ್ತದೆ ಎಂಬುದನ್ನು ಈ ನಾಟಕದಲ್ಲಿ ನೋಡಬಹುದು.

ಊಳಿಗಮಾನ್ಯ ಪದ್ಧತಿಯಲ್ಲಿ ನಡೆಯುವ ಮೌನಸಂಘರ್ಷ ಹಾಗೂ ಊಳಿಗಮಾನ್ಯ ವ್ಯವಸ್ಥೆಯೊಳಗಿನ ವರ್ಗ ಹಿಂಸೆಯ ಹೃದಯ ವಿದ್ರಾವಕ ಸ್ಥಿತಿಯನ್ನು ಕಂಬಾರರು ಈ ನಾಟಕದಲ್ಲಿ ಚಿತ್ರಿಸಿದ್ದಾರೆ.

ಈ ನಾಟಕದಲ್ಲಿ ಗುರ್ಯಾ ಗೌಡನಿಗೆ ಹೆದರಿ ಅವನಂತೆಯೇ ನಡೆದರೆ, ಇವನ ವರ್ಗಕ್ಕೆ ಸೇರಿದ ನಿಂಗಿಯು ಗೌಡನನ್ನು ಪ್ರತಿಭಟಿಸುತ್ತಾಳೆ. ಇಲ್ಲಿ ಒಂದು ಹೆಣ್ಣಿಗಿರುವ ಧೈರ್ಯ ಗಂಡಿನಲ್ಲಿಲ್ಲ ಎಂಬುದನ್ನು ನೋಡಬಹುದು. ಗಂಡು ಹೆಣ್ಣಿನ ಮೇಲೆ ದಮನ ಮಾಡಿದಾಗ ಒಂದು ನಿರ್ದಿಷ್ಟ ವ್ಯಕ್ತಿತ್ವ ಹೇಗೆ ಹೊರಗೆಬರುತ್ತದೆ ಎಂದು ಹಾಗೂ ಯಾವ ಹೆಣ್ಣು ತನ್ನ ಶೀಲ ಚಾರಿತ್ರ್ಯವಧೆಯನ್ನು ಬಯಸುವುದಿಲ್ಲವೆಂದು ಇವಳ ಪಾತ್ರದಿಂದ ನೋಡಬಹುದು.

ಗುರ್ಯಾ : ಗೌಡರ ಕೇಳತಾರ ಹೇಳಲ್ಲ, ಊರಗೌಡ ಹೆಸರ ಕೇಳೋದು
ಹೆಚ್ಚೋ ? ನೀ ಹೇಳೋದು ಹೆಚ್ಚೋ ?

ನಿಂಗಿ : ಊರ ಗೌಡ ಹೆಸರ ಕೇಳ್ಯಾನಂತ ತನ್ನ ಬಾಯಾಗೇನೂ
ಜೊಲ್ಲ ಬಂದಿಲ್ಲದ.. ಆ.. [೧೦]
(ಬಾಯಿ ತೆರೆದು ಅಣಿಕಿಸುವಳು )

ಇಲ್ಲಿ ಇವಳು ಗೌಡನ ಅಧಿಕಾರವನ್ನುಪ್ರಶ್ನಿಸುತ್ತಾಳೆ. ಅವರಂತೆಯೇ ನಾವು ಮನುಷ್ಯರು ಎಂಬುದನ್ನು ಸಾಬೀತು ಪಡಿಸುತ್ತಾಳೆ. ಹಾಗೇ ಎಷ್ಟೇ ಕಷ್ಟ ಬಂದರೂ

ಊಳಿಗಮಾನ್ಯ ವಿರುದ್ಧ ಹೋರಾಡಲು ಪಣ ತೊಟ್ಟಿರುವಂತೆ ಕಾಣುತ್ತಾಳೆ. ಶ್ರೀಮಂತಿಕೆ ಮತ್ತು ಅಧಿಕಾರದಿಂದ ಹೆಣ್ಣನ್ನು, ಬಡವಗನ್ನು ಕೊಂಡುಕೊಳ್ಳಲು ಸಾಧ್ಯವಿಲ್ಲವೆಂಬುದನ್ನು ಶೋಷಿತರಿಗೆ ತೋರಿಸಿದ್ದಾಳೆ.

ಜೇಮ್ಸ್ ಪರ್‌ನಂಡೆಜ್ ಈ ರೀತಿ ಹೇಳುತ್ತಾನೆ. '' ಮೇಲ್ವರ್ಗ ಹೇರಿರುವ ಕೀಳರಿಮೆ ಮತ್ತು ಪರಾವಲಂಬನೆಯ ಭಾವನೆಯ ವಿರುದ್ಧ ಕೆಳವರ್ಗವು ಬಂಡಾಯವೆದ್ದು ಸ್ವಾಯತ್ತತೆ ಮತ್ತು ಸ್ವತಂತ್ರ ಜೀವನವನ್ನು ಸಾಗಿಸಲು ಪ್ರಯತ್ನಿಸುತ್ತದೆ.'' ಎಂಬುದಕ್ಕೆ ಬಸಣ್ಣ ಇಲ್ಲಿ ಸಾಕ್ಷಿಯಾಗಿದ್ದಾನೆ. ಇವನು ಸಮಾಜವಾದದ ಆಶಯವನ್ನಿಟ್ಟುಕೊಂಡು ಗೌಡನ ವಿರುದ್ಧ ಸಿಡಿದೇಳುತ್ತಾನೆ. ಹಾಗೂ ಇವನ ಗೆಳೆಯ ಗುರ್‍ಯಾನನ್ನು ಕ್ರಾಂತಿಗೆ ಪ್ರಚೋದಿಸುತ್ತಾನೆ. ದುಡಿಯುವವನಿಗೆ ಭೂಮಿಯ ಸಹಜ ಅಧಿಕಾರವನ್ನು ಹಸ್ತಾಂತರಿಸುವ ಸರಕಾರೀ ಯೋಜನೆಯನ್ನು ಬಸಣ್ಣ ತಾನೇ ಜಾರಿಗೊಳಿಸುತ್ತಾನೆ. ಇವನ ಬೆಂಬಲದಿಂದಾಗಿ ಗುರ್‍ಯಾ ಗೌಡನನ್ನು ಉರುಳಿಸುವಷ್ಟು ಧೀರನಾಗುತ್ತಾನೆ. ಗೌಡನ ಒಣ ಚಪಲಕ್ಕೆ ಗುರಿಯಾಗಿದ್ದ ನಿಂಗಿಯ ಕೈ ಹಿಡಿಯುತ್ತಾನೆ. ನಿಂಗಿಯ ಪ್ರಭಾವದಿಂದಾಗಿ ಗೌಡನನ್ನು ನೇರವಾಗಿ ತಿರಸ್ಕರಿಸುತ್ತಾನೆ. ಪ್ರಜಾಪ್ರಭುತ್ವ ಒಬ್ಬ ಸಾಮಾನ್ಯ ವ್ಯಕ್ತಿಗೆ ಎಂಥ ಧೈರ್ಯ ನೀಡಿದೆಯೆಂಬುದನ್ನು ಇಲ್ಲಿ ಗುರುತಿಸಬಹುದು.

ಗೌಡ : ನಾಯಿ ಮಗನ ;

(ಒದೆಯ ಹೋಗುವನು ಗುರ್‍ಯಾ ಅದೇ ಕಾಲು ಹಿಡಿದೆಳೆದಾಗ ಗೌಡ ಬೀಳುವನು)

ಗುರ್‍ಯಾ : ನಾಯೀ ಮಗಾ ನಾನೋ ನೀನೋ ಲುಚ್ಚಾ ? [೧೧]

ಗೌಡನು ಎಲ್ಲವನ್ನೂ ದುಡ್ಡಿನಿಂದ ಅಳೆಯುವ ಹಾಗೂ ಪಡೆಯುವ ವ್ಯಕ್ತಿತ್ವವುಳ್ಳವನಾಗಿದ್ದಾನೆ. ಒಂದು ವಸ್ತುವನ್ನು ದುಡ್ಡಿನಿಂದ ಕೊಂಡುಕೊಳ್ಳುವ ರೀತಿ ಹೆಣ್ಣುಗಳನ್ನು ಹಾಗೂ ಗಂಡುಗಳನ್ನು ಕೊಂಡುಕೊಳ್ಳುತ್ತಾನೆ. ಇವನು ನಿಂಗಿಯನ್ನು ಗುರ್‍ಯಾನಿಗೆ ಮೂರು ರೂಪಾಯಿಗೆ ಮಾರುತ್ತೇನೆ ತೆಗೆದುಕೋ ಎಂದು ಹೇಳುತ್ತಾನೆ. ಹಾಗೂ ಬಸಣ್ಣನಿಗೆ ನನ್ನ ಬಂದೂಕನ್ನು ಹಿಡಿದುಕೊಂಡರೆ ನಾಲ್ಕು ರೂಪಾಯಿ ಕೊಡುತ್ತೇನೆಂದು ಹೇಳಿ ಬೇರೆಯವರ ವ್ಯಕ್ತಿತ್ವವನ್ನು ತನ್ನ ಶ್ರೀಮಂತಿಕೆಯ ಗತ್ತಿನಿಂದ ಅಳೆಯುತ್ತಾನೆ. ಇಲ್ಲಿ

ಊಳಿಗಮಾನ್ಯ ವ್ಯವಸ್ಥೆಯ ಒಡಲಲ್ಲಿ ಅಡಗಿರುವ ಹುಸಿ ಪ್ರತಿಷ್ಠೆ, ಕ್ರೌರ್ಯ ಮತ್ತು ಅಮಾನವೀಯತೆಯನ್ನು ಯಥಾವತ್ತಾಗಿ ಕಂಬಾರರು ಬಳಸಿಕೊಂಡಿದ್ದಾರೆ.

ಬಸಣ್ಣ ಆಧುನಿಕ ಸಂವೇದನೆಯನ್ನು ರೂಪಿಸಿಕೊಂಡು ಪ್ರಜಾಪ್ರಭುತ್ವದ ಕಾಯ್ದೆ, ಕಾನೂನುಗಳನ್ನು ತಿಳಿದುಕೊಂಡು ಆ ಹಳ್ಳಿಯ ನಿರಂಕುಶ ಪ್ರಭುವಾದ ಗೌಡನಿಗೆ ತಿರುಗೇಟು ನೀಡುತ್ತಾನೆ.

ಬಸಣ್ಣ : ಯಾವ ಉಳತಾನ ಅವನ ಭೂಮಿ ಮಾಲಿಕ ಅಂತ ಕಾಯ್ದೆ
ಬಂದಾವ ಹೇಳವಗ [೧೨]

ಆದರೆ ಗೌಡ ಅನಕ್ಷರಸ್ಥರ ಮುಗ್ಧತನವನ್ನು ದುರ್ಬಳಕೆ ಮಾಡಿಕೊಂಡು ಅವರಿಂದ ಬಲವಂತವಾಗಿ ಹೆಬ್ಬೆಟ್ಟನ್ನು ಹಾಕಿಸಿಕೊಂಡು ಭೂಮಿಯನ್ನು ತನ್ನ ವಶಮಾಡಿಕೊಂಡಿದ್ದಾನೆ. ಸರ್ಕಾರದ ಕಾಯ್ದೆ ಕಾನೂನುಗಳನ್ನು ತನ್ನ ತೆಕ್ಕೆಯಲ್ಲಿ ವಶಮಾಡಿಕೊಂಡಿದ್ದಾನೆ. ನಮ್ಮ ಜನರು ಎಲ್ಲಿಯವರೆಗೆ ಅಕ್ಷರಸ್ಥರಾಗಿರುವುದಿಲ್ಲವೋ ಅಲ್ಲಿಯವರೆಗೆ ಈ ಶೋಷಣೆ ಮುಂದುವರಿಯುತ್ತದೆ ಎಂಬ ಕಟುಸತ್ಯವನ್ನು ಕಂಬಾರರು ಇಲ್ಲಿ ಹೇಳಿದ್ದಾರೆ.

ಗೌಡ : ಬೇಕಾದ್ದ ಕಾಯಿಲೆ ಬರಲಿ, ಕಾನೂನು ಬರಲಿ ದುಡ್ಡಿದ್ದಾವ
ಯಾವತ್ತು ದೊಡ್ಡಾವಂತ ತಿಳಕೊ. ಮೂರಲ್ಲ ಆರ ದುಡ್ಡ ಕೊಟ್ಟರ
ನಿನ್ನ ಕಾಯ್ದೆ
ಕಾನೂನ ನನ್ನ ಕಿಸೇದಾಗ ಬಿದ್ದಾಡತಾವ [೧೩]

ಈ ನಾಟಕದಲ್ಲಿ ಕಂಬಾರರು ನಮ್ಮ ದೇಶದ ಲಂಚತನದ ಭ್ರಷ್ಟತೆಯನ್ನು ಅಣಕಿಸಿದ್ದಾರೆ. ಸಂವಿಧಾನವು ಏನೇ ಕಾನೂನು ಕಟ್ಟಳೆಗಳನ್ನು ಹೊರತಂದಿದ್ದರೂ ಕೂಡ ಶ್ರೀಮಂತರೂ, ಅಧಿಕಾರವುಳ್ಳವರು ಅದನ್ನು ಹಣದಿಂದ ಕೊಂಡುಕೊಳ್ಳುವ ರೀತಿ ಊಹೆಗೂ ನಿಲುಕದ್ದು. ನಮ್ಮ ದೇಶದಲ್ಲಿ ಇಂದಿಗೂ ಇದು ಪ್ರಸ್ತುತಗೊಂಡಿರುವುದು ಶೋಚನೀಯ ಸಂಗತಿಯಾಗಿದೆ. ಬಡವರಿಗೆ ನ್ಯಾಯ ದೊರೆಯುವುದೇ ಇಲ್ಲವೆಂಬ ವಾಸ್ತವ ಸಂಗತಿಯನ್ನು ಕಂಬಾರರು ಇಲ್ಲಿ ಹೇಳಿದ್ದಾರೆ. ಇಲ್ಲಿ ಬಸಣ್ಣ ಸಾವನ್ನಪ್ಪುವುದನ್ನು

ನೋಡಿದರೆ ಸಾಮಾಜಿಕ ಕ್ರಾಂತಿಗೆ ಆದ ಹಿನ್ನೆಡೆ ಎಂದು ನಾವು ಭಾವಿಸಬಹುದು. ಇವನು ತನಗೆ ಸಹಜವಾಗಿ ದಕ್ಕಬೇಕಾಗಿದ್ದ ಹೊಲವನ್ನು ಪಡೆದುಕೊಂಡಾಗ ಪ್ರಜಾಪ್ರಭುತ್ವದ ಧೋರಣೆಗೆ ದೊರೆತ ಜಯವೆಂದು ತಿಳಿದುಕೊಳ್ಳುವಷ್ಟರಲ್ಲಿ ಇವನ ಕೊಲೆ ನಡೆಯುತ್ತದೆ. ಇದರಿಂದಾಗಿ ಊಳಿಗಮಾನ್ಯ ವ್ಯವಸ್ಥೆಯ ಕರಾಳ ಹಸ್ತಗಳು ಎಷ್ಟು ಬಲಿಷ್ಠವಾಗಿದೆ ಎಂಬುದನ್ನು ನೋಡಬಹುದು.

ಡಾ. ಬಸವರಾಜ ಮಲಶೆಟ್ಟಿಯವರು ಕಂಬಾರರ ಜೋಕುಮಾರ ಸ್ವಾಮಿ ನಾಟಕದ ಬಗ್ಗೆ ಈ ರೀತಿ ಹೇಳಿದ್ದಾರೆ. ''ಊಳಿಗಮಾನ್ಯ ವ್ಯವಸ್ಥೆಯ ಕೊನೆಯ ಕೊಂಡಿ ಆಗಿರುವ ಗೌಡ ಆ ವ್ಯವಸ್ಥೆಯ ಇತಿಹಾಸವೇ ಆಗಿದ್ದಾನೆ. ಜೀವಶಕ್ತಿಯನ್ನು ಕಳೆದುಕೊಂಡು ಒಳಗೊಳಗೆ ಪೊಳ್ಳಾಗಿರುವ ಈ ವ್ಯವಸ್ಥೆ ತನ್ನ ದೌರ್ಬಲ್ಯ ಮುಚ್ಚಿಕೊಳ್ಳಲು ಭೋಗವಿಲಾಸಗಳ ಬಾಹ್ಯಾಡಂಬರವನ್ನು ಮೆರೆಯುತ್ತಾ ಬಂದಿದೆ. ಭೂಮಿ ಮತ್ತು ಹೆಣ್ಣುಗಳನ್ನು ಪ್ರತಿಷ್ಠೆಗಾಗಿ . ಸಂಗ್ರಹಿಸಿದ್ದನ್ನು ಜೋಪಾನವಾಗಿ ಕಾಪಾಡಿಕೊಳ್ಳುತ್ತದೆ. ತನ್ನ ಉರವಣಿಗೆಯಿಂದಾಗಿ ಈ ವ್ಯವಸ್ಥೆ ಹುಳ ಹತ್ತಿದ ಮರದಂತಾಗುವುದು ಮತ್ತು ಪ್ರಜಾಪ್ರಭುತ್ವದ ಬಿರುಗಾಳಿ ಅದನ್ನು ನೆಲಕ್ಕೆ ಕೆಡವಿದ್ದು ಚಾರಿತ್ರಿಕ ಸಂಗತಿಗಳು.'' [೧೪]

ಇಲ್ಲಿ ಬಸಣ್ಣ ಕೊಲೆಯಾದರೂ ಕೂಡ ಅವನ ಪ್ರತಿರೂಪದಂತೆ ಗೌಡ್ತಿಯ ಹೊಟ್ಟೆಯಲ್ಲಿ ಮಗು ಬೆಳೆಯುವುದು. ಹಾಗೂ ಗುರ್‍ಯಾ ನಿರ್ಧಾರ ಮಾಡಿ ಬಸಣ್ಣ ಕುಡುಗೋಲು ಕೈಗೆತ್ತಿಕೊಳ್ಳುವುದನ್ನು ನೋಡಿದರೆ ಇದು ಮುಂದೆ ನಡೆಯಬಹುದಾದ ದೊಡ್ಡ ಕ್ರಾಂತಿಯ ಸೂಚನೆಗಳಂತಿದೆ.

ಎರ್ಮಾ ನಾಟಕದಲ್ಲಿ ಲೋರ್ಕಾನು ವರ್ಗಸಂಘರ್ಷ ವನ್ನು ಎತ್ತಿಹಿಡಿದಿಲ್ಲವಾದರೂ ಇಲ್ಲಿ ಬರುವ ಯುವಾನ್ ಊಳಿಗಮಾನ್ಯ ವ್ಯವಸ್ಥೆಯ ಪ್ರತಿನಿಧಿಯಂತೆ ಕಾಣುತ್ತಾನೆ. ವಿಕ್ಟರ್ ಇವನ ಕೈ ಕೆಳಗೆ ದುಡಿಯುವ ವ್ಯಕ್ತಿಯಾಗಿ ಕಂಡುಬರುತ್ತಾನೆ. ಕಂಬಾರರ ನಾಟಕದಲ್ಲಿ ಗೌಡ ಭೂಮಿಯ ಮೇಲೆ ಒಡೆತನ ಸಾಧಿಸಿದರೆ ಇಲ್ಲಿ ಯುವಾನ್ ಕುರಿಗಳ ಮೇಲೆ ಒಡೆತನ ಸಾಧಿಸುತ್ತಾನೆ.

ಯುವಾನ್:( ಎರ್ಮಾಳಿಗೆ) ನಾನು ಅವನ ಕುರಿಗಳನ್ನು ಕೊಂಡುಕೊಂಡಿದೀನಿ [೧೫]

ಇಲ್ಲಿ ಯುವಾನ್ ತನ್ನ ಶ್ರೀಮಂತಿಕೆಯಿಂದ ಎಲ್ಲವನ್ನು ಕೊಂಡುಕೊಳ್ಳಬಹುದೆಂಬ ಧೋರಣೆಯಿಂದ ವಿಕ್ಟರ್ ಮೇಲೆ ಅಧಿಪತ್ಯ ಸಾಧಿಸುತ್ತಾನೆ. ಇವನು ಕುರಿಗಳನ್ನು ಕೊಂಡುಕೊಳ್ಳುವಂತೆ ಹೆಣ್ಣುಗಳನ್ನು ಕೊಂಡುಕೊಳ್ಳುವೆನೆಂಬಂತೆ ಮಾತನಾಡುತ್ತಾನೆ.

ವಿಕ್ಟರ್ : ಇನ್ನು ಯುವಾನ್‌ನ ನೆಲ ತುಂಬಿ ತುಳುಕುತ್ತೆ.[೧೬]

ಇಲ್ಲಿ ವಿಕ್ಟರ್‌ನ ಮನೋಭಾವ ನೋಡಿದರೆ ಊಳಿಗಮಾನ್ಯ ವ್ಯವಸ್ಥೆಯನ್ನು ಮೌನವಾಗಿ ಸಮ್ಮತಿಸಿಕೊಂಡಿದ್ದಾನೆಂದು ತೋರುತ್ತದೆ. ಹಾಗೂ ಸಮಾಜವಾದಿ ಕ್ರಾಂತಿಯ ಮುನ್ಸೂಚನೆ ಇನ್ನೂ ಆ ದೇಶಕ್ಕೆ ಸಿಕ್ಕಿಲ್ಲದಂತೆ ಕಾಣುತ್ತದೆ.

## ಅಡಿಟಿಪ್ಪಣಿಗಳು

೧. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೨

೨. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೬

೩. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೭

೪. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೫

೫. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೫

೬. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೬

೭. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೧೭

೮ ಫ್ರೆಡರಿಕ್ ಏಂಜಲ್ಸ್ : ಜಿ. ರಾಮಕೃಷ್ಣ, ಪುಟ-೩೩

೯. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೩೮

೧೦. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೨೦

೧೧. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೬೫

೧೨. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೪೦

೧೩. ಜೋಕುಮಾರ ಸ್ವಾಮಿ : ಚಂದ್ರಶೇಖರ ಕಂಬಾರ, ಪುಟ-೪೨

೧೪. ಚಂದ್ರಶೇಖರ ಕಂಬಾರ : ಡಾ. ಬಸವರಾಜ ಮಲಶೆಟ್ಟಿ, ಪುಟ-೫೮

೧೫. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೪೬

೧೬. ಲೋರ್ಕಾ ನಾಟಕ ಎರ್ಮಾ : ಎಸ್. ಗಂಗಾಧರಯ್ಯ, ಪುಟ-೪೬

# ಸಮಾರೋಪ

ಪ್ರಸ್ತುತ ಅಧ್ಯಯನದಲ್ಲಿ ಫೆಡೆರಿಕೊ ಗಾರ್ಸಿಯಾ ಲೋರ್ಕಾರ 'ಎರ್ಮಾ' ಹಾಗೂ ಚಂದ್ರಶೇಖರ ಕಂಬಾರರ ಜೋಕುಮಾರಸ್ವಾಮಿ ನಾಟಕಗಳನ್ನು ಸ್ತ್ರೀವಾದ ನೆಲೆಯಿಂದ ತೌಲನಿಕ ಅಧ್ಯಯನಕ್ಕೆ ಒಳಪಡಿಸಿ ಚರ್ಚಿಸಲಾಗಿದೆ. ಹೆಣ್ಣಿನ ಸಂವೇದನೆ ಆಸೆ, ಬಯಕೆ, ಆಶಯಗಳು, ಸಮಸ್ಯೆಗಳು, ಅವರು ಬದುಕನ್ನು ಎದುರಿಸುವ ಕ್ರಮ ಇತ್ಯಾದಿಗಳನ್ನು ಈ ನಾಟಕಕಾರರು ತಮ್ಮ ಸಂಸ್ಕೃತಿ ಕಾಲಘಟ್ಟ ದೇಶದ ಸಂವೇದನೆಗೆ ತಕ್ಕಂತೆ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ.

ಕಂಬಾರರು ನವ್ಯದ ಕಾಲದಲ್ಲಿದ್ದ ಸಂವೇದನೆಯ ಆಕಾರಗಳನ್ನು ಅಳವಡಿಸಿಕೊಂಡು ಮತ್ತು ಸ್ತ್ರೀವಾದ ನೆಲೆಗಳಿಂದ ಪ್ರೇರಿತರಾಗಿ ಪುರುಷ ಪ್ರಧಾನ ಧೋರಣೆಯನ್ನು ವಿರೋಧಿಸುವ ಪ್ರತಿನಿಧಿಗಳನ್ನು ತಮ್ಮ ನಾಟಕದಲ್ಲಿ ತಂದಿದ್ದಾರೆ. ಇಲ್ಲಿ ಜನಪದೀಯ ಹೆಣ್ಣೊಬ್ಬಳು ಸಿದ್ಧಮಾದರಿಯನ್ನು ಒಡೆಯುವ ಪ್ರಯತ್ನ ಮಾಡಿದ್ದಾಳೆ.

ಲೋರ್ಕಾ ಜಗತ್ತಿನ ವಿಖ್ಯಾತ ಜನಪದ ಸತ್ಯವನ್ನು ಪ್ರಜ್ಞೆಯ ನಾಟಕಕಾರ ' ಸ್ಪೈನ್‌ನ ಜನಪದ ಲೋಕದಿಂದ ತನ್ನ ಗ್ರಾಮೀಣ ಸಮಾಜದ ಜನ ಜೀವನವನ್ನು ಈ ನಾಟಕದಲ್ಲಿ ಅರ್ಥಪೂರ್ಣವಾಗಿ ಚಿತ್ರಿಸಿದ್ದಾನೆ. ಇವನು ಇಪ್ಪತ್ತನೇ ಶತಮಾನದಲ್ಲಿದ್ದ ವಾಸ್ತವವಾದಕ್ಕಿಂತ ಭಿನ್ನವಾದ ಸಿಗ್ಮಂಡ್ ಫ್ರಾಯ್ಡ್‌ನ ಮನೋವಿಶ್ಲೇಷಣೆಯ ಕ್ರಮವಾದ ಸರ್ರಿಯಲಿಸಂ'ನ್ನು ತನ್ನ ನಾಟಕದಲ್ಲಿ ಅಳವಡಿಸಿಕೊಂಡಿದ್ದಾನೆ. ಇಬ್ಬರು ನಾಟಕಕಾರರು ಪುರುಷ ಕೇಂದ್ರಿತ ವ್ಯವಸ್ಥೆಯ ನ್ಯೂನತೆಗಳನ್ನು ಪ್ರಶ್ನೆ ಮಾಡುತ್ತಾ ಸ್ತ್ರೀಯ ಧೈರ್ಯ ದೃಢ ನಿರ್ಧಾರಕ್ಕೆ ಒತ್ತು ನೀಡಿದ್ದಾರೆ. ಇದರಿಂದ ಅನ್ಯಾಯ, ಅಕ್ರಮ, ಅತ್ಯಾಚಾರಗಳಲ್ಲಿ ತೊಡಗುವ ಹೆಣ್ಣಿನ ವಿರೋಧಿ ಪುರುಷರಿಗೆ ತಾವು ತಪ್ಪು ಮಾಡಿದರೆ ಸ್ತ್ರೀಯರು ನಮ್ಮನ್ನು ಪ್ರಶ್ನಿಸುತ್ತಾರೆ ಎಂಬುದನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ.

ಈ ನಾಟಕಗಳಲ್ಲಿ ಜಾನಪದ ಸೊಗಡು ಹರಿದು ಬಂದಿರುವುದನ್ನು ನೋಡಿದ್ದೇವೆ. ಈ ಜಾನಪದ ಆಚರಣೆಯ ಹಿನ್ನೆಲೆಯಲ್ಲಿ ಸಮಕಾಲೀನ ಸಮಾಜದ ಮಾನವನ ವರ್ತನೆ ಮತ್ತು ವೈಪರೀತ್ಯಗಳನ್ನು ನಾಟಕಕಾರರು ಚಿತ್ರಿಸಿದ್ದಾರೆ. ಹಾಗೂ ಗಂಡು-ಹೆಣ್ಣುಗಳ

# ಸಮಾರೋಪ

ಪ್ರಸ್ತುತ ಅಧ್ಯಯನದಲ್ಲಿ ಫೆಡೆರಿಕೊ ಗಾರ್ಸಿಯಾ ಲೋರ್ಕಾರ 'ಎರ್ಮಾ' ಹಾಗೂ ಚಂದ್ರಶೇಖರ ಕಂಬಾರರ ಜೋಕುಮಾರಸ್ವಾಮಿ ನಾಟಕಗಳನ್ನು ಸ್ತ್ರೀವಾದ ನೆಲೆಯಿಂದ ತೌಲನಿಕ ಅಧ್ಯಯನಕ್ಕೆ ಒಳಪಡಿಸಿ ಚರ್ಚಿಸಲಾಗಿದೆ. ಹೆಣ್ಣಿನ ಸಂವೇದನೆ ಆಸೆ, ಬಯಕೆ, ಆಶಯಗಳು, ಸಮಸ್ಯೆಗಳು, ಅವರು ಬದುಕನ್ನು ಎದುರಿಸುವ ಕ್ರಮ ಇತ್ಯಾದಿಗಳನ್ನು ಈ ನಾಟಕಕಾರರು ತಮ್ಮ ಸಂಸ್ಕೃತಿ ಕಾಲಘಟ್ಟ ದೇಶದ ಸಂವೇದನೆಗೆ ತಕ್ಕಂತೆ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ.

ಕಂಬಾರರು ನವ್ಯದ ಕಾಲದಲ್ಲಿದ್ದ ಸಂವೇದನೆಯ ಆಕಾರಗಳನ್ನು ಅಳವಡಿಸಿಕೊಂಡು ಮತ್ತು ಸ್ತ್ರೀವಾದ ನೆಲೆಗಳಿಂದ ಪ್ರೇರಿತರಾಗಿ ಪುರುಷ ಪ್ರಧಾನ ಧೋರಣೆಯನ್ನು ವಿರೋಧಿಸುವ ಪ್ರತಿನಿಧಿಗಳನ್ನು ತಮ್ಮ ನಾಟಕದಲ್ಲಿ ತಂದಿದ್ದಾರೆ. ಇಲ್ಲಿ ಜನಪದೀಯ ಹೆಣ್ಣೊಬ್ಬಳು ಸಿದ್ಧಮಾದರಿಯನ್ನು ಒಡೆಯುವ ಪ್ರಯತ್ನ ಮಾಡಿದ್ದಾಳೆ.

ಲೋರ್ಕಾ ಜಗತ್ತಿನ ವಿಖ್ಯಾತ ಜನಪದ ಸತ್ಯವನ್ನು ಪ್ರಜ್ಞೆಯ ನಾಟಕಕಾರ 'ಸ್ಪೈನ್'ನ ಜನಪದ ಲೋಕದಿಂದ ತನ್ನ ಗ್ರಾಮೀಣ ಸಮಾಜದ ಜನ ಜೀವನವನ್ನು ಈ ನಾಟಕದಲ್ಲಿ ಅರ್ಥಪೂರ್ಣವಾಗಿ ಚಿತ್ರಿಸಿದ್ದಾನೆ. ಇವನು ಇಪ್ಪತ್ತನೇ ಶತಮಾನದಲ್ಲಿದ್ದ ವಾಸ್ತವವಾದಕ್ಕಿಂತ ಭಿನ್ನವಾದ ಸಿಗ್ಮಂಡ್ ಫ್ರಾಯ್ಡ್‌ನ ಮನೋವಿಶ್ಲೇಷಣೆಯ ಕ್ರಮವಾದ ಸರ್ರಿಯಲಿಸಂ'ನ್ನು ತನ್ನ ನಾಟಕದಲ್ಲಿ ಅಳವಡಿಸಿಕೊಂಡಿದ್ದಾನೆ. ಇಬ್ಬರು ನಾಟಕಕಾರರು ಪುರುಷ ಕೇಂದ್ರಿತ ವ್ಯವಸ್ಥೆಯ ನ್ಯೂನತೆಗಳನ್ನು ಪ್ರಶ್ನೆ ಮಾಡುತ್ತಾ ಸ್ತ್ರೀಯ ಧೈರ್ಯ ದೃಢ ನಿರ್ಧಾರಕ್ಕೆ ಒತ್ತು ನೀಡಿದ್ದಾರೆ. ಇದರಿಂದ ಅನ್ಯಾಯ, ಅಕ್ರಮ, ಅತ್ಯಾಚಾರಗಳಲ್ಲಿ ತೊಡಗುವ ಹೆಣ್ಣಿನ ವಿರೋಧಿ ಪುರುಷರಿಗೆ ತಾವು ತಪ್ಪು ಮಾಡಿದರೆ ಸ್ತ್ರೀಯರು ನಮ್ಮನ್ನು ಪ್ರಶ್ನಿಸುತ್ತಾರೆ ಎಂಬುದನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ.

ಈ ನಾಟಕಗಳಲ್ಲಿ ಜಾನಪದ ಸೊಗಡು ಹರಿದು ಬಂದಿರುವುದನ್ನು ನೋಡಿದ್ದೇವೆ. ಈ ಜಾನಪದ ಆಚರಣೆಯ ಹಿನ್ನೆಲೆಯಲ್ಲಿ ಸಮಕಾಲೀನ ಸಮಾಜದ ಮಾನವನ ವರ್ತನೆ ಮತ್ತು ವೈಪರೀತ್ಯಗಳನ್ನು ನಾಟಕಕಾರರು ಚಿತ್ರಿಸಿದ್ದಾರೆ. ಹಾಗೂ ಗಂಡು-ಹೆಣ್ಣುಗಳ

ಸಂಬಂಧಗಳ ವಿಭಿನ್ನ ಮುಖಗಳನ್ನೂ ಸೂಕ್ಷ್ಮವಾಗಿ ಸಂಕೀರ್ಣವಾಗಿ ತಮ್ಮ ನಾಟಕಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಈ ನಾಟಕಗಳಲ್ಲಿ ಮೊದಲು ಪುರುಷಪ್ರಧಾನ ವ್ಯವಸ್ಥೆ ಕಂಡುಬಂದರೂ ನಂತರ ಹೆಣ್ಣು ಅದನ್ನು ಧೈರ್ಯವಾಗಿ ದಿಟ್ಟವಾಗಿ ಎದುರಿಸಿದ್ದಾಳೆ. ತನ್ನ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಸಿದಿರುವ ಈ ವ್ಯವಸ್ಥೆಯ ವಿರುದ್ಧ ಹೋರಾಡಿ ತನಗೂ ಬದುಕಿನಲ್ಲಿ ಆಯ್ಕೆಯ ಅವಕಾಶಗಳಿರಬೇಕು. ಹಾಗೂ ತನ್ನ ವಿಚಾರಧರೆಯನ್ನು ಅಭಿವ್ಯಕ್ತಿಸುವ ಸ್ವಾತಂತ್ರ್ಯವಿರಬೇಕೆಂಬ ಹಂಬಲವನ್ನು ವ್ಯಕ್ತಪಡಿಸುತ್ತಾಳೆ.

ಈ ನಾಟಕಗಳು ಯಾವ ಕಾಲಘಟ್ಟದಲ್ಲಿ ರಚಿತವಾದರೂ ಕೂಡ ಅಲ್ಲಿ ಬರುವ ಸ್ತ್ರೀಪ್ರತಿಭಟನೆಯು ಎಲ್ಲಾ ಕಾಲಕ್ಕೂ ಅನ್ವಯಿಸುವಂತದ್ದಾಗಿದೆ. ಆದರೆ ಇಂದು ಸ್ತ್ರೀ ಇನ್ನೂ ಧೈರ್ಯವಾಗಿ ದಿಟ್ಟತನದಿಂದ ಈ ಸಮಸ್ಯೆಯನ್ನು ಎದುರಿಸುತ್ತಿದ್ದಾಳೆ. ಈ ಎರಡೂ ನಾಟಕಗಳಲ್ಲಿ ತಾಯ್ತನ ಎಂಬ ಪರಿಕಲ್ಪನೆಯು ಪ್ರಧಾನವಾಗಿ ಬಂದಿದೆ. ಹೆಣ್ಣಿಗೆ ತಾಯ್ತನವಿಲ್ಲದಿದ್ದರೆ ಅವಳ ಬದುಕು ನಶ್ವರ, ಅವಳಿಗೆ ಎಲ್ಲೂ ಮೋಕ್ಷ ದೊರೆಯದು ಎಂಬ ಸಮಾಜ ಹೇರಿರುವ ಕಟ್ಟುಪಾಡುಗಳನ್ನು ಈ ನಾಟಕಗಳು ಪ್ರಶ್ನಿಸುತ್ತದೆ. ಆದರೂ ಇಂದಿನ ಸಮಾಜದಲ್ಲೂ ಹೆಣ್ಣು ಏನೇ ಒತ್ತಡದ ಕೆಲಸವಿದ್ದರೂ ತಾಯ್ತನಬೇಕೆಂದು ಹಂಬಲಿಸುವ ಪ್ರವೃತ್ತಿಯನ್ನು ನೋಡುತ್ತೇವೆ. ಸ್ತ್ರೀವಾದ ಚಿಂತನೆಯು ಹೆಣ್ಣಿಗೆ ಮುಕ್ತ ತಾಯ್ತನವನ್ನು ಪಡೆಯುವ ಅವಕಾಶ ಮಾಡಿ ಕೊಡುವ ನಿಟ್ಟಿನಲ್ಲಿ ಪ್ರಯತ್ನಿಸುತ್ತಿದೆ. ಎರ್ಮಾ ಒಂದು ಕಡೆ 'ನಾನೊಬ್ಬಳೆ ಮಕ್ಕಳನ್ನು ಪಡೆಯೋ ಹಾಗಿದ್ರೇ' ಎಂಬ ಮಾತು ಹೇಳುತ್ತಾಳೆ. ಇದು ಆಧುನಿಕ ಸ್ತ್ರೀವಾದಗಳು ಬಳಸುತ್ತಿರುವ ಮಾತುಗಳಾಗಿವೆ. ಈಗ ಪ್ರಸ್ತುತ ಸಮಾಜದಲ್ಲಿ ಬಾಡಿಗೆ ಗರ್ಭ ಸಿಗುವುದನ್ನು ನೋಡಬಹುದು.

ಲೋರ್ಕಾರ ಎರ್ಮಾ ನಾಟಕದಲ್ಲಿ ತಾಯ್ತನದ ಹಂಬಲವೇ ಹೆಚ್ಚಾಗಿದೆ ಎನ್ನುವ ರೀತಿ ಚಿತ್ರಿತವಾದರೆ ಕಂಬಾರರ ಜೋಕುಮಾರಸ್ವಾಮಿ ನಾಟಕದಲ್ಲಿ ತಾಯ್ತನದ ಜೊತೆಗೆ ವರ್ಗ ಸಂಘರ್ಷವನ್ನು ಪ್ರಧಾನವಾಗಿ ತಂದಿರುವುದನ್ನು ನೋಡಬಹುದು. 'ಉಳುವವನೆ ಭೂಮಿಯ ಒಡೆಯ' ಎಂಬ ಸಮಾಜವಾದಿ ಘೋಷಣೆಯನ್ನು ಈ ನಾಟಕ

ಒಳಗೊಂಡಿದೆ. ಹೆಂಗಸರು ಮತ್ತು ದುಡಿಮೆಗಾರರು ಸಮಾನ ದುಃಖಿಗಳು ಇಬ್ಬರು ಶೋಷಿತರೇ ಎಂಬ ವಾಸ್ತವ ಸತ್ಯವನ್ನು ಈ ನಾಟಕದಲ್ಲಿ ಕಂಬಾರರು ಬಿಂಬಿಸಿದ್ದಾರೆ.

ಈಗ ನಮ್ಮ ಪ್ರಸ್ತುತ ಸಮಾಜದಲ್ಲೂ ಸರ್ಕಾರ ಏನೇ ಕಾನೂನು ಕಟ್ಟಳೆಗಳನ್ನು ತಂದರೂ ಸಹ ಇದಕ್ಕಾಗಿ ಹಲವಾರು ಕ್ರಾಂತಿಗಳು ಜರುಗಿದರೂ ಕೂಡ ಇನ್ನೂ ಕೆಲವು ಕಡೆ ಈ ವರ್ಗದ ತಾರತಮ್ಯ ಇರುವುದನ್ನು ನಾವು ನೋಡಬಹುದು. ಈ ವರ್ಗ ಸಂಘರ್ಷವಂತೂ ಬಗೆಹರಿಯದ ಸಮಸ್ಯೆಯಾಗಿಯೇ ಉಳಿದಿದೆ.

ಈ ನಾಟಕಗಳಲ್ಲಿ ದೈವದ ಪರಿಕಲ್ಪನೆಯು ಮೂಢಿಬಂದಿದೆ. ಕೊನೆಗೆ ದೈವವನ್ನು ನಂಬಿದರೂ ಕೂಡ ಆಗುವ ನಿರಾಶೆಯು ವ್ಯಕ್ತವಾಗಿವೆ. ಅಂದರೆ ಇಲ್ಲಿ ಇಬ್ಬರು ನಾಟಕಕಾರರು ಮನುಷ್ಯನು ಪ್ರತಿಯೊಂದಕ್ಕೂ ದೇವರ ಮೇಲೆ ಅವಲಂಬಿತವಾಗುವುದನ್ನುತ ಪರೋಕ್ಷವಾಗಿ ಖಂಡಿಸಿದ್ದಾರೆ. ದೇವರ ಜೊತೆಗೆ ಮನುಷ್ಯನ ಸ್ವಂತ ಪರಿಶ್ರಮ ಶ್ರದ್ಧೆ ಮತ್ತು ಪ್ರಾಮಾಣಿಕ ಪ್ರಯತ್ನವಿದ್ದರೆ ಆದಕ್ಕೆ ತಕ್ಕ ಪ್ರತಿಫಲ ಸಿಕ್ಕೇ ಸಿಗುತ್ತದೆ ಎಂಬುದನ್ನು ಹೇಳಿದ್ದಾರೆ.

ಈ ನಾಟಕಗಳು ಸೈದ್ಧಾಂತಿಕ ನೆಲೆಯಿಂದ ಕೂಡಿದುದಾಗಿದೆ. ಇದು ಸ್ತ್ರೀವಾದಿ ನೆಲೆಯಲ್ಲೂ, ದಲಿತವಾದಿ ಸಂವೇದನೆಯಲ್ಲೂ ಹಾಗೂ ಮಾರ್ಕ್ಸ್‌ವಾದಿ ದೃಷ್ಟಿಕೋನದಲ್ಲೂ ರಚಿತವಾಗಿದೆ.ಇಲ್ಲಿನಾಟಕಕಾರರು ಹೆಣ್ಣಿನ ಸ್ವಗತ, ಕನಸು ಹಾಗೂ ಭಾವನೆಗಳನ್ನು ಹಾಡಿನ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ. ವಿಫುಲವಾದ ಸಂಕೇತಗಳನ್ನು ತಮ್ಮ ನಾಟಕದುದ್ದಕ್ಕೂ ತಂದಿದ್ದಾರೆ. ಗಂಡು-ಹೆಣ್ಣಿನ ಸಹಜ ಬಯಕೆಯಾದ ಕಾಮದ ಪರಿಕಲ್ಪನೆಯನ್ನು ಪ್ರಧಾನವಾಗಿ ಹೇಳಿದ್ದಾರೆ. ಹಾಗೂ ಆಧುನಿಕ ಸಂವೇದನೆಯನ್ನು ತಂದಿದ್ದಾರೆ.

'ನಹೀ ಜ್ಞಾನೇನ ಸದೃಶಂ' ಎಂಬಂತೆ ಜ್ಞಾನಕ್ಕೆ ಸರಿಸಮಾನವಾದುದು ಯಾವುದು ಇಲ್ಲ. ಹಾಗೆಯೇ ಅದನ್ನು ಲಿಂಗಬೇಧವಿಲ್ಲದೆ ಯಾರು ಬೇಕಾದರೂ ಪಡೆಯಬಹುದೆಂದು ನಮ್ಮ ಸ್ತ್ರೀವಾದಿಗಳು ಸಾರಿದ್ದಾರೆ. ಇಂದು ಹೆಣ್ಣು ಶಿಕ್ಷಣ ಮತ್ತು ಜ್ಞಾನವನ್ನು ಹೆಚ್ಚು ರೂಢಿಸಿಕೊಂಡಿದ್ದಾಳೆ. ಆದರೂ ಸಹ ಹೆಣ್ಣು ಗಂಡಿನ ಶೋಷಣೆಗೆ

ನಿರಂತರ ಒಳಗಾಗುತ್ತಿರುವುದನ್ನು ನೋಡಬಹುದು. ಅವಳ ಮೇಲೆ ನಿಲ್ಲದ ಶೋಷಣೆಯು ಇದು ಎಲ್ಲಾ ಕಾಲದಲ್ಲೂ, ಎಲ್ಲಾ ವರ್ಗದಲ್ಲೂ, ಎಲ್ಲಾ ದೇಶಗಳಲ್ಲೂ, ಕಟು ವಾಸ್ತವವಾಗಿಯೇ ಉಳಿದಿದೆ.

ಮಹಿಳೆಯರ ಸ್ಥಾನಮಾನ ಸುಧಾರಣೆಯಾಗಬೇಕಾದರೆ ಮೊದಲು ಪುರುಷ ಮಹಿಳೆಯನ್ನು ಕಾಣುವ ದೃಷ್ಟಿಕೋನದಲ್ಲಿ ಬದಲಾವಣೆಯಾಗಬೇಕು. ತನ್ನ ಸಮಾನಳು ಎನ್ನುವ ಗೌರವ ಭಾವನೆ ಅವನಲ್ಲಿ ಮೂಡದ ಹೊರತು ಸರ್ಕಾರ ಅವಳಿಗೆ ಎಷ್ಟೇ ಸಮಾನ ಹಕ್ಕುಗಳನ್ನು ಕೈಕೊಂಡರೂ ಅದರಿಂದ ಪ್ರಯೋಜನವಿಲ್ಲ. ಪರಸ್ಪರ ತಿಳಿದುಕೊಂಡು ಗೌರವಿಸುತ್ತ ಸುಖಕ್ಕಾಗಿ ಪ್ರಯತ್ನಿಸುವುದರಲ್ಲಿಯೇ ಸರ್ವರ ಕಲ್ಯಾಣವಿದೆ.

## ಪರಾಮರ್ಶನ ಗ್ರಂಥಗಳು


೧. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ : ವಿವಿಧ ಲೇಖಕರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೬.

೨. ಸ್ತ್ರೀವಾದಿ ಸಾಹಿತ್ಯ ವಿಮರ್ಶೆ : ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ಕನ್ನಡ ಸಂಘ ಕ್ರೈಸ್ಟ್ ಕಾಲೇಜು, ೧೯೯೪

೩. ಸುವರ್ಣ ಸಾಹಿತ್ಯ ವಿಮರ್ಶೆ : ಎಚ್. ದಂಡಪ್ಪ, ಬಿ.ಎನ್. ಸುಮಿತ್ರಾಬಾಯಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೨೧೦೬

೪. ಬೈದವ್ವ ಕೇಳಾ ನನ ಮಾತಾ.... : ಡಾ. ಡಿ.ಮಂಗಳಾ ಪ್ರಿಯದರ್ಶಿನಿ, ಸಚ್ಚಿನ್ ಪಬ್ಲಿಷರ್ಸ್, ೨೦೦೭.

೫. ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು : ಡಾ. ಬಿ.ಎನ್. ಸುಮಿತ್ರಾಬಾಯಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೬. ಇದು ಮಾನುಷಿಯ ಓದು : ಮಹೇಶ್ವರಿ. ಯು., ಶಿವರಾಮ ಕಾರಂತ, ಅಧ್ಯಯನ ಕೇಂದ್ರ, ಪುತ್ತೂರು, ೨೦೦೧

೭. ದ ಸೆಕೆಂಡ್ ಸೆಕ್ಸ್ : ಸಿಮೋನ್ ದ ಬೋವಾ, (ಅನು: ಡಾ. ಎಚ್. ಎಸ್. ಶ್ರೀಮತಿ), ಅಧ್ಯಯನ ಮಂಡಲ, ಬೆಂಗಳೂರು, ೨೦೦೭

೮. ಮಹಿಳೆ ಬಿಡುಗಡೆಯ ಹಾದಿಯಲ್ಲಿ : ಎನ್. ಗಾಯತ್ರಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೧.

೯. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು : ಡಾ. ಪ್ರೀತಿ ಶುಭಚಂದ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೦. ಮಹಿಳೆ ಮತ್ತು ಶಿಕ್ಷಣ : ಶಾಲಿನಿರಾಮಚಂದ್ರ ಹೆಗಡೆ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೨

೧೧. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ : ಡಾ.ಎಚ್.ಎಸ್. ಶ್ರೀಮತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೨. ಸ್ತ್ರೀವಾದ : ಡಾ.ಎಚ್.ಎಸ್. ಶ್ರೀಮತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೩. ಸ್ತ್ರೀವಾದ ದಕ್ಷಿಣ ಏಷ್ಯಾದಲ್ಲಿ : ಅನು: ವೆಂ. ವನಜ, ಹೆಚ್.ಆರ್. ರಾಜೇಶ್ವರಿ (ಮೂಲ : ಕಮಲಾಭಾಸಿನ್ ನಿಘಾತ ಸೈಯದ್‌ಖಾನ್, ಸಮತಾ ಪ್ರಗತಿಪರ, ಮಹಿಳಾ ವೇದಿಕೆ, ೧೯೯೯

೧೪. ಮಹಿಳೆ ಮತ್ತು ಕನ್ನಡ ಮತ್ತು ಸಾಹಿತ್ಯ : ಜಿ.ಎಸ್. ಶಿವರುದ್ರಪ್ಪ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೯

೧೫ ಚಂದ್ರಶೇಖರ ಕಂಬಾರ : ಡಾ. ಬಸವರಾಜ ಮಲಶೆಟ್ಟಿ, ನವಕರ್ನಾಟಕ, ಪ್ರಕಾಶನ, ೨೦೦೧

೧೬. ಆನ್ವಯಿಕ ಜಾನಪದ : ಡಾ. ಬಿ.ಎ. ವಿವೇಕರೈ, ಕನ್ನಡ ಪುಸ್ತಕ ಪ್ರಾಧಿಕಾರ, ೧೯೪೫

೧೭. ಕರ್ನಾಟಕ ರಂಗಭೂಮಿ : ಡಾ. ಎಚ್.ಕೆ. ರಂಗನಾಥ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೦

೧೮. ಲೋರ್ಕಾನ ಮೂರು ನಾಟಕಗಳು : ಕೆ.ಎನ್. ವಿಜಯಲಕ್ಷ್ಮಿ, ಸಿ.ವಿ.ಜಿ. ಪಬ್ಲಿಕೇಷನ್ಸ್, ೨೦೦೦

